# ಚಂದಮಾಮ

ಸಂಸ್ಥಾಪಕರು: **ನಾಗಿರೆಡ್ಡಿ**

ಸಂಚಾಲಕರು: **'ಚಕ್ರಪಾಣಿ'**

---

**ಸ**ರ್ವಸಾಧಾರಣವಾಗಿ ಮಾನವರ ಗುಣವು ಪರಿಸ್ಥಿತಿಯೊಂದಿಗೆ ಬದಲಾಯಿಸಿಹೋಗುವುದುಂಟು. ಕಷ್ಟದಲ್ಲಿರುವಾಗ ಸಹಾಯ ಮಾಡಿದವರಿಗೆ, ಪ್ರತ್ಯುಪಕಾರ ಮಾಡಬೇಕೆಂಬ ಪ್ರಜ್ಞೆ ಕಷ್ಟಗಳು ನೀಗಿ ನಿಶ್ಚಳವಾದ ಮೇಲೆ, ಮೆಲ್ಲನೆ ಬದಿಗೆ ಸರಿದು ಮರೆಯಾಗುತ್ತದೆ. ತನ್ನ ಸುಖವು ತನ್ನ ಪ್ರಯತ್ನದಿಂದಲೇ ಬಂದಿತೆಂಬ ಸಮರ್ಥನೆಯೂ ಮಾಡಿಕೊಳ್ಳುತ್ತದೆ. ರಾಮನ ಸಹಾಯದಿಂದ ವಾಲಿಯನ್ನು ತೊಲಗಿಸಿದ ಸುಗ್ರೀವನಿಗೆ ಹೀಗೆಯೇ ಆಯಿತು. ಕಡೆಗೆ ಹನುಮಂತನಿಂದ ಎಚ್ಚರಕ್ಕೆ ಬಂದನೆಂಬುದನ್ನು "ವೀರ ಹನುಮಾನ್"ದಲ್ಲಿ ಓದುವಿರಿ.

---

ಸಂಪುಟ: ೫೫ ]　　ಮೇ '೭೫　　[ ಸಂಚಿಕೆ : ೫





# ಮಿತ್ರಭೇದ

## ೨೨

### ವಂಚಕನ ಕಥೆ

ಹಿಂದೆ ಒಂದಾನೊಂದು ಕಾಲದಲ್ಲಿ ಕೋಸಲ ದೇಶಕ್ಕೆ ರಾಜಧಾನಿಯಾದ ಅಯೋಧ್ಯಾ ನಗರದಲ್ಲಿ ಸುರಥನೆಂಬ ದೊಡ್ಡ ರಾಜನಿದ್ದ. ಅವನು ಚಕ್ರವರ್ತಿಯಾದುದರಿಂದ ಅವನ ಕೈಕೆಳಗೆ ನೂರಾರು ಸಾಮಂತ ರಾಜ್ಯಗಳಿದ್ದುವು. ಅವನ ಪರಿಪಾಲನೆ ಬಹಳ ಚೆಂದಾಗಿ ಸಾಗುತ್ತಿರಲು, ಒಂದು ದಿನ ಅರಣ್ಯ ಶಾಖೆಯ ಮುಖ್ಯಾಧಿಕಾರಿ ಅತಿ ವೇಗವಾಗಿ ಬಂದು, ಸುರಥ ರಾಜನೊಂದಿಗೆ ಹೀಗೆ ಹೇಳಿದನು:

"ಮಹಾರಾಜರೆ, ಅರಣ್ಯರಾಜ್ಯವು ಅಸ್ತವ್ಯಸ್ತವಾಗಿದೆ. ವಿಂಧ್ಯಕನೆಂಬ ವಿದ್ರೋಹಿಯ ಮುಖಂಡತ್ವದಲ್ಲಿ ಆಟವಿಕ ಜಾತಿಯವರೆಲ್ಲ ಒಂದಾಗಿ ಬಂಡಾಯವೆದ್ದುಬಿಟ್ಟಿದ್ದಾರೆ. ಅವರ ಬಲವನ್ನು ಅಡಗಿಸಲು ನನ್ನಿಂದ ಸಾಧ್ಯವಾಗದೆ ಹೋಯಿತು. ತಾವು ಕೂಡಲೇ ಬೇಕಾದುದನ್ನು ಮಾಡಬೇಕಾಗಿದೆ."

ಆದನ್ನು ಕೇಳಿ ರಾಜನು ಆ ಬಂಡಾಯವನ್ನು ಅಡಗಿಸಲು, ಅದರ ನಾಯಕನನ್ನು ಹಿಡಿದು ಶಿಕ್ಷಿಸಲು, ಪ್ರಜ್ಞಾವಂತನೂ, ಬುದ್ಧಿಕುಶಲತೆಯುಳ್ಳವನೂ ಆದ ಯುದ್ಧಮಂತ್ರಿ ಬಲಭದ್ರನೆಂಬವನನ್ನು ಕಳುಹಿಸಿದನು. ಬಲಭದ್ರನು ಸೈನ್ಯದೊಂದಿಗೆ ಹೊರಟುಹೋದ ನಂತರ, ಗ್ರೀಷ್ಮಕಾಲದ ಕೊನೆಯ ಭಾಗದಲ್ಲಿ ಅಯೋಧ್ಯಾ ನಗರಕ್ಕೆ ಒಬ್ಬ ದಿಗಂಬರ ಸನ್ಯಾಸಿ ಬಂದನು. ಅವನು ಪ್ರಶ್ನಿಸಿದವರಿಗೆ ಭವಿಷ್ಯತ್ತು ಹೇಳತೊಡಗಿದ. ಹಾಗೆಯೇ ಜಾತಕ ಗುಣಿಸುವುದು, ಮುಹೂರ್ತ ಕಟ್ಟುವುದು, ಶಕುನದ ಫಲಗಳನ್ನು ಹೇಳುವುದು, ಮಂದಿಯ ಗುಟ್ಟುಗಳನ್ನು ತಿಳಿದು ಅದಕ್ಕೆ ತಕ್ಕಂತೆ ಮಾತಾಡುವುದು ಮೊದಲಾದುವುಗಳಿಂದ ಕೆಲವೇ ದಿನಗಳಲ್ಲಿ ಪ್ರಸಿದ್ಧನಾದ.

ಈ ಸನ್ಯಾಸಿಯ ಪ್ರಭಾವವನ್ನು ಕೇಳಿಕೇಳಿ ಕಿವಿ ತುಂಬಿಹೋದ ಸುರಥರಾಜನು ಕುತೂಹಲಗೊಂಡು ಅವನನ್ನು ರಾಜಭವನಕ್ಕೆ ಕರೆಯಿಸಿ, "ಅಯ್ಯಾ, ನೀವು ಮನಸ್ಸಿನೊಳಗಿರುವುದನ್ನು ಕಂಡುಹಿಡಿದು ಹೇಳುವಿರಂತೆ. ಇದು ನಿಜವೆ?" ಎಂದು ಕೇಳಿದ.

"ನಾನು ಎಷ್ಟು ಕಡೆಯಲ್ಲಿ ಏನೇನು ಮಾಡಿದ್ದೇನೆಂಬುದನ್ನು ವಿಚಾರಿಸಿದರೆ ನಿಮಗೇ ಗೊತ್ತಾಗುತ್ತದೆ. ನನ್ನ ಹತ್ತಿರ ಬರುವವರು ಒಬ್ಬಿಬ್ಬರಲ್ಲ—" ಎಂದು

ಹಿಂಬದಿಯ ಚಿತ್ರ ಕಥೆ

ಸನ್ಯಾಸಿ ತಾನು ಮಾಡಿದ ಘನಕಾರ್ಯಗಳನ್ನು ಒಂದೊಂದಾಗಿ ತಾನೇ ಹೇಳುತ್ತ ರಾಜನಿಗೆ ವಿಸ್ಮಯವನ್ನುಂಟುಮಾಡಿದ. ರಾಜನು ಆ ಸನ್ಯಾಸಿಗೆ ಗೌರವವಿತ್ತು, ದೇವರ ಮಠದ ಆವರಣದೊಳಗೆ ಅವನಿಗೊಂದು ಮಠವನ್ನು ಕೊಟ್ಟು, ದಿನಾ ಅಲ್ಲಿಗೆ ಕರೆಯಿಸಿ ಆದರಿಸಲು ತೊಡಗಿದ.

ಒಂದು ದಿನ ಸಾಯಂಕಾಲ ಆ ಸನ್ಯಾಸಿ ರಾಜಭವನಕ್ಕೆ ಬಂದು, "ರಾಜಾ, ನಿನಗೊಂದು ಶುಭವಾರ್ತೆಯನ್ನು ಹೇಳುತ್ತೇನೆ. ದೇವತೆಗಳೆಲ್ಲರೂ ಬಂದು ನನ್ನನ್ನು ತುಂಬಾ ಬಲವಂತಪಡಿಸಿದುದರಿಂದ ನಾನು ಈ ದಿನ ಬೆಳಂಜಾಮದಲ್ಲಿ, ನನ್ನ ಭೌತಿಕ ದೇಹವನ್ನು ಮಠದೊಳಗೆ ಬಿಟ್ಟು, ಸೂಕ್ಷ್ಮ ಶರೀರದಿಂದ ಸ್ವರ್ಗಕ್ಕೆ ಹೋಗಿದ್ದೆ. ಇದೇ ಈಗ ತುಸು ಮುಂಚೆ ಹಿಂದಿರುಗಿ ಬಂದು ನನ್ನ ಈ ದೇಹಕ್ಕೆ ಹೊಕ್ಕಿದ್ದೇನೆ. ದೇವತೆಗಳೆಲ್ಲಾ ನಿಮ್ಮ ಕ್ಷೇಮ ಕೇಳಿದರು. ನೀನೂ ಧನ್ಯನಾದೆ ಮಹಾರಾಜಾ." ಎಂದು ಹೇಳಿದ.

ರಾಜನಿಗಾದ ಆಶ್ಚರ್ಯಕ್ಕೆ ಅಳತೆಯೇ ಇಲ್ಲ. "ಮಹಾತ್ಮರೆ, ನೀವು ಸ್ವರ್ಗಕ್ಕೆ ಹೇಗೆ ಹೋದಿರಿ? ಅದು ಸುಲಭ ಸಾಧ್ಯವೆ?" ಎಂದ.

"ಸುಲಭವಲ್ಲವೆಂಬುದು ನಿಜ. ಸಾಧನೆಯಿಂದ ಸಿದ್ಧಿ ಮಾಡಿಕೊಳ್ಳಬೇಕು. ನನಗೆ ಅದು ಲೀಲಾ ಮಾತ್ರವಾಗಿದೆ. ನಾನು ದಿನಾ ಸ್ವರ್ಗಕ್ಕೆ ಹೋಗಿ ಬರುತ್ತಾ ಇರುತ್ತೇನೆ" ಎಂದ ಸನ್ಯಾಸಿ.

ರಾಜನು ಸರಳ ಸ್ವಭಾವದವನಾದುದರಿಂದಲೋ, ಸನ್ಯಾಸಿಯ ಶಕ್ತಿಗಳನ್ನು ಪ್ರತ್ಯಕ್ಷ ನೋಡಿರುವೆನೆಂಬ ನಂಬುಗೆಯಿಂದಲೋ, ಅವನ ಅದ್ಭುತ ಲೀಲೆಗಳನ್ನು ಕಿವಿತುಂಬಾ ಕೇಳಿದುದರಿಂದಲೋ ಅವನ ಮಾತುಗಳನ್ನೆಲ್ಲ ಗಟ್ಟಿಯಾಗಿ ನಂಬಿಬಿಟ್ಟ. ಆಮೇಲೆ ಅವನು ರಾಜಕಾರ್ಯಗಳ ಗೊಡವೆಗಳನ್ನು ಬಿಟ್ಟ. ತನ್ನ ರಾಣಿಯನ್ನು ಕುರಿತು ಯೋಚಿಸುವುದನ್ನು ಕೂಡಾ ಬಿಟ್ಟು, ಯಾವಾಗಲೂ ಆ ಸನ್ಯಾಸಿಯನ್ನು ತನ್ನ ಹತ್ತಿರವಿಟ್ಟು



ಕೊಂಡು ಸ್ವರ್ಗಲೋಕದ ವಾರ್ತಾವಿಶೇಷಗಳನ್ನು ಕೇಳತೊಡಗಿದ. ಸನ್ಯಾಸಿಯೂ ರಮ್ಯವಾದ ಸ್ವರ್ಗದ ಸಮಾಚಾರಗಳನ್ನು ಹೇಳುತ್ತಲೇ ಇದ್ದುದರಿಂದ ರಾಜ್ಯದ ಹಾಗು ರಾಜನ ಕುಟುಂಬದ ಪರಿಸ್ಥಿತಿಗಳು ಅಸ್ತವ್ಯಸ್ತವಾಗತೊಡಗಿದುವು.

ಅಷ್ಟರಲ್ಲಿ ಅರಣ್ಯ ಪ್ರಾಂತದಲ್ಲಿ ಬಂಡಾಯವನ್ನೆಲ್ಲ ಅಡಗಿಸಿ, ಯುದ್ಧಮಂತ್ರಿ ಬಲಭದ್ರನು ಅಯೋಧ್ಯೆಗೆ ಬಂದನು. ಅವನು ರಾಜಧಾನಿಯನ್ನು ಪ್ರವೇಶಿಸಿದ ಕೂಡಲೇ ರಾಜನು ಸನ್ಯಾಸಿಯ ಕೈಯ ಕೀಲುಬೊಂಬೆಯಾಗಿರುವ ಸಂಗತಿ ಅವನಿಗೆ ತಿಳಿಯಿತು. ರಾಜನು ಸಭೆಗೆ ಬರುವುದಿಲ್ಲವೆಂದೂ, ಮಂತ್ರಿಗಳೊಡನೆ ಆಲೋಚನೆ ನಡೆಸುವುದಿಲ್ಲವೆಂದೂ, ಅಂತಃಪುರಕ್ಕೆ ಹೋಗುವುದನ್ನು ಕೂಡ ಬಿಟ್ಟಿರುವನೆಂದೂ ಅವನಿಗೆ ಗೊತ್ತಾಯಿತು. ರಾಜಭವನದ ದರ್ಬಾರು ಮಂಟಪವು ನಿರ್ಜನವಾಗಿದ್ದಿತು. ಮಂತ್ರಿಗಳಿರುವ ಸ್ಥಳದಲ್ಲಿ ಜೇಡನ ಬಲೆ ತುಂಬಿತ್ತು. ಒಂದು

ಕೋಣೆಯಲ್ಲಿ ರಾಜನೂ ಸನ್ಯಾಸಿಯೂ ಏಕಾಂತವಾಗಿ ಕುಳಿತುಕೊಂಡು ಮಾತಾಡುತ್ತಿದ್ದರು. ಸನ್ಯಾಸಿ ರಾಜನಿಗೆ ಏನನ್ನೋ ಬಹಳ ಗುಟ್ಟಾಗಿ ಹೇಳುತ್ತಿದ್ದ. ರಾಜನು ಅರಳುಮೊಗದಿಂದ ಸನ್ಯಾಸಿಯ ಮಾತುಗಳನ್ನು ಗುಟಕರಿಸುತ್ತಿದ್ದ. ಅದನ್ನು ನೋಡಿದ ಕೂಡಲೇ ಮಂತ್ರಿ ಬಲಭದ್ರನಿಗೆ ಪರಿಸ್ಥಿತಿಯ ಅರ್ಥವೆಲ್ಲ ಪ್ರತ್ಯಕ್ಷವಾಯಿತು. ಅವನು ಮಹಾರಾಜನ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿ, "ಮಹಾರಾಜರಿಗೆ ಜಯಜಯ!" ಎಂದನು.

ತಾನು ಯಾವ ಕೆಲಸಕ್ಕೆ ಆ ಮಂತ್ರಿಯನ್ನು ಕಳಿಸಿರುವೆನೆಂಬುದನ್ನು ಕೂಡಾ ನೆನಪಿಲ್ಲದೆ ರಾಜನು, "ನೋಡಿ ಬಲಭದ್ರರೇ, ನಿಮಗೆ ಈ ಮಹಾತ್ಮರು ಗೊತ್ತೆ?" ಎಂದು ಸನ್ಯಾಸಿಯನ್ನು ತೋರಿಸಿ ಕೇಳಿದ.

"ಆಹಾ! ಎಷ್ಟೋ ಮಂದಿ ಶಿಷ್ಯರನ್ನು ಮಹಾಪುರುಷರನ್ನಾಗಿ ಮಾಡಿದ ಈ ಮಹಾಮಹಿಮರನ್ನು ಗೊತ್ತಿಲ್ಲವೆಂದರೇನು? ಇವರು ಆಗಾಗ ಸ್ವರ್ಗಕ್ಕೆ ಕೂಡಾ ಹೋಗಿಬರುವರೆಂದು ಕೇಳಿದ್ದೇನೆ. ನಿಜವೇ?" ಎಂದ ಬಲಭದ್ರ, ನಂಬಿಯೂ ನಂಬಲಾಗದವನಂತೆ.

"ಸಂದೇಹವೇ ಬೇಡ" ಎಂದ ರಾಜ.

ತನ್ನನ್ನು ಕುರಿತು ಮಂತ್ರಿ ಇಷ್ಟೊಂದು ದೊಡ್ಡ ಮಾತುಗಳನ್ನು ಹೇಳಿದುದನ್ನು ಕೇಳಿ ಸನ್ಯಾಸಿ ತುಂಬ ಹಿಗ್ಗಿದ. ಮಂತ್ರಿಗೆ ಇನ್ನಷ್ಟು ನಂಬುಗೆ ಏರ್ಪಡುವಂತೆ ಮಾಡಲು, "ಯಾಕೆ ಸಂದೇಹ? ಕುತೂಹಲವಿದ್ದರೆ ಮಂತ್ರಿಗಳು ಆ ಸಂಗತಿಯನ್ನು ಸ್ವತಃ ನೋಡಬಹುದಲ್ಲ? ಬನ್ನಿ" ಎಂದು ಹೇಳಿ ಎದ್ದು ಮಠಕ್ಕೆ ಹೋಗಿ ತನ್ನ ಕೋಣೆಯೊಳಗೆ ಹೊಕ್ಕು ಬಾಗಿಲಿಕ್ಕಿ ಒಳಗಿನಿಂದ ಅಗಳಿ ಹಾಕಿಕೊಂಡ.

ಕೆಲವು ನಿಮಿಷಗಳು ಕಳೆದಮೇಲೆ ಮಂತ್ರಿ ರಾಜನನ್ನು ನೋಡಿ, "ಅವರು ಸ್ವರ್ಗದಿಂದ ಯಾವಾಗ ಹಿಂದಿರುಗುತ್ತಾರೆ?" ಎಂದು ಕೇಳಿದ.

"ಅವಸರವೇನಿದೆ? ಅವರು ತಮ್ಮ ದೇಹವನ್ನು ಮಠದೊಳಗೆ ಬಿಟ್ಟು, ಸೂಕ್ಷ್ಮ ಶರೀರದಿಂದ ಸ್ವರ್ಗಕ್ಕೆ ಹೋಗಿದ್ದಾರೆ" ಎಂದ ರಾಜ.

"ಅದು ನಿಜವಾದರೆ ಬೆಂಕಿಯನ್ನೂ ಕಟ್ಟಿಗೆಯನ್ನೂ ಬೇಗನೆ ತರಿಸಿರಿ ಮಹಾರಾಜರೇ. ಈ ಮಠಕ್ಕೆ ಅಗ್ನಿ ಸಂಸ್ಕಾರ ಮಾಡೋಣ" ಎಂದ ಮಂತ್ರಿ. ರಾಜನು ಆಶ್ಚರ್ಯದಿಂದ "ಏಕೆ?" ಎಂದ.

"ಏಕೆಂದು ಕೇಳುವಿರಾ? ಜೀವವಿಲ್ಲದ ದೇಹ ಅಪವಿತ್ರವಾದ ಶವ. ಕಟ್ಟಿಗೆಯಂತಹ ಶವವು ಸುಟ್ಟು ಹೋದಮೇಲೆ ಅವರು ಸೂಕ್ಷ್ಮ ಶರೀರದಿಂದ ತಮ್ಮ ಬಳಿಗೆ ಬರುತ್ತಾರೆ. ಅದರಿಂದ ಪ್ರಪಂಚದಲ್ಲೆಲ್ಲಾ ತಮ್ಮ ಕೀರ್ತಿ ವ್ಯಾಪಿಸುತ್ತದೆ. ಈ ಸಂದರ್ಭದಲ್ಲಿ ನನಗೆ ನಾಗಕುಮಾರಿಯ ಕಥೆ ನೆನಪಾಗುತ್ತದೆ." ಎಂದು ಮಂತ್ರಿ ಆ ಕಥೆಯನ್ನು ಹೇಳತೊಡಗಿದ.






# ಮೂವರು ಬಿಲ್ಲಾಳುಗಳು

ಪಟ್ಟು ಬಿಟ್ಟರೂ ಹಟ ಬಿಡದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹಿಂದಿರುಗಿ, ಮರದ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹೊತ್ತುಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಅತ್ಯಂತ ಪ್ರತಿಭಾಶಾಲಿ ಎಂಬುದಕ್ಕೆ ಸಂದೇಹವಿಲ್ಲ. ಆದರೆ ಎಷ್ಟೇ ಪ್ರತಿಭೆಯುಳ್ಳವನನ್ನಾದರೂ ಮೀರಿಸುವಂತಹ ಪ್ರತಿಭಾವಂತನೊಬ್ಬ ಪ್ರಪಂಚದಲ್ಲಿದ್ದಾನೆಂಬುದನ್ನು ಮರೆಯಬೇಡ. ಇದಕ್ಕೆ ನಿದರ್ಶನವಾಗಿ ನಿನಗೆ ಸವ್ಯಸಾಚಿ ಎಂಬವನ ಕಥೆ ಹೇಳುತ್ತೇನೆ, ಕೇಳುತ್ತಾ ನಡೆದರೆ ನಿನಗೆ ಶ್ರಮ ತಿಳಿಯಲಾರದು" ಎಂದು ಕಥೆಯನ್ನು ಪ್ರಾರಂಭಮಾಡಿತು :

ಸವ್ಯಸಾಚಿಯಂಥವನು ಅವನ ಊರಿನಲ್ಲಾಗಲೀ ಬೇರೆ ಊರುಗಳಲ್ಲಾಗಲೀ ಯಾರೂ ಇರಲಿಲ್ಲ. ಅವನಲ್ಲಿರುವ ವಿಶೇಷವೇನೆಂದರೆ, ಅವನು ಎರಡು ಕೈಯಿಂದಲೂ ಎರಡು ಬಾಣಗಳನ್ನು ಒಂದೇಬಾರಿಗೆ ಬಿಡಬಲ್ಲ ಬಿಲ್ಲಾಳಾಗಿದ್ದನು. ಆ ಕಾರಣದಿಂದಲೇ

ಬೇತಾಳಕಥೆಗಳು?...



ಅವನಿಗೆ ಸವ್ಯಸಾಚಿ ಎಂಬ ಹೆಸರು ಬಂದು, ಅವನ ನಿಜವಾದ ಹೆಸರು ಮರೆತುಹೋಗಿತ್ತು. ಅವನ ಲಾಘವವು ಎಷ್ಟರಮಟ್ಟಿಗೆ ಇತ್ತೆಂದರೆ, ಅವನು ಎರಡು ಕೈಗಳಿಂದ ಆಕಾಶದಲ್ಲಿ ಹಾರಿಕೊಂಡಿರುವ ಎರಡು ಪಕ್ಷಿಗಳನ್ನು ಹೊಡೆದು ಕೆಡವಬಲ್ಲವನು. ಎಲ್ಲರೂ ಅವನ ಬಿಲ್ಲು ವಿದ್ಯೆಯ ಕುಶಲತೆಯನ್ನು ಹೊಗಳುವವರೇ.

ಅವನಿಗೆ ತಾನು ಅಷ್ಟು ದೊಡ್ಡ ಜಾಣನಾಗಿರುವುದು ನಿಜವೇ ಎಂದು ಸಂದೇಹವಾಯಿತು. ಎಂತೆಂಥವರೂ ತನ್ನನ್ನು ಹೊಗಳುವುದನ್ನು ನೋಡಿ, ತನಗಿಂತಲೂ ದೊಡ್ಡ ಬಿಲ್ಲಾಳುಗಳು ಪ್ರಪಂಚದಲ್ಲಿ ಇದ್ದಾರೋ ಇಲ್ಲವೋ ಎಂಬುದನ್ನು ಪರೀಕ್ಷಿಸಿಬಿಡಬೇಕೆಂಬ ಕುತೂಹಲ ಉಂಟಾಯಿತು. ಅದಕ್ಕಾಗಿ ಅವನು ಪರ್ಯಟನೆಗೆ ಹೊರಟನು.

ಅವನು ಬಹಳ ದೂರ ಪ್ರಯಾಣ ಮಾಡಿ ಒಂದಾನೊಂದು ಗ್ರಾಮವನ್ನು ತಲಪಿದನು. ಆ ಊರಿನ ವಿಶೇಷವೇನೆಂದು ಅಲ್ಲಿಯವರನ್ನು ವಿಚಾರಿಸಿದಾಗ, ಪ್ರಸ್ತುತ ಅಲ್ಲಿ ದಸರೆಯ ಉತ್ಸವ ನಡೆಯುತ್ತಿರುವ ಸಮಾಚಾರ ಗೊತ್ತಾಯಿತು. ಅದು ಆ ಊರಿನಲ್ಲಿ ಬಹಳ ವಿಶೇಷವಂತೆ. ಅದರಲ್ಲಿ ಬಿಲ್ಲುಗಾರರನೇಕರು ತಮ್ಮ ತಮ್ಮ ನೈಪುಣ್ಯತೆಯನ್ನು ಪ್ರದರ್ಶಿಸುತ್ತಾರಂತೆ. ತಾನು ಕೂಡಾ ತನ್ನ ಪ್ರಾವೀಣ್ಯತೆಯನ್ನು ಪ್ರದರ್ಶಿಸಲಿಕ್ಕೆ ಅದು ತಕ್ಕ ಅವಕಾಶವೆಂದು ಸವ್ಯಸಾಚಿಗೆ ತೋರಿತು. ತನಗಿಂತ ಹೆಚ್ಚಿನವರನ್ನು ತಿಳಿಯಲಿಕ್ಕೂ ಇದೊಂದು ಸಂದರ್ಭವೆನಿಸಿದುದರಿಂದ, ಅವನೂ ಆ ಉತ್ಸವ ನಡೆಯುವ ಸ್ಥಳಕ್ಕೆ ಹೋದನು.

ಜನರ ಮಧ್ಯದಲ್ಲಿ ಒಂದುಕಡೆ ಸ್ವಲ್ಪ ಜಾಗವನ್ನು ಖಾಲಿಮಾಡಿಸಿ ಅಲ್ಲಿ ಒಂದು ಗಂಟೆಯನ್ನು ಕಟ್ಟಿದರು. ಆಮೇಲೆ ಒಬ್ಬ ಕುರುಡನನ್ನು ರಂಗದ ಮಧ್ಯಕ್ಕೆ ನಡೆಯಿಸಿಕೊಂಡು ಬಂದು ನಿಲ್ಲಿಸಿ ಅವನ ಕೈಗೆ ಬಿಲ್ಲು, ಬಾಣಗಳನ್ನು ಕೊಟ್ಟರು. ಗಂಟೆಯನ್ನು ಎಳೆದು ಶಬ್ದ ಮಾಡಿಸಲಾಯಿತು. ಕೂಡಲೇ ಕುರುಡನು ಬಿಲ್ಲಿಗೆ ಬಾಣ ಹೂಡಿ ನಾಣೆಳೆದು ಬಾಣ ಬಿಟ್ಟನು. ಆ ಬಾಣ ಗುರಿ ತಪ್ಪದೆ ಬಂದು ಗಂಟೆಯನ್ನು ತಾಗಿ ಧ್ವನಿ ಎಬ್ಬಿಸಿತು. ಪ್ರೇಕ್ಷಕರು ಹರ್ಷಧ್ವನಿ ಮಾಡಿದರು.

ಉತ್ಸವದ ಗೌಜಿ ಮುಗಿದಮೇಲೆ ಸವ್ಯಸಾಚಿ ಆ ಕುರುಡ ಬಿಲ್ಲಾಳನ್ನು ಮಾತಾಡಿಸಿ, "ಅಣ್ಣಾ, ನೀನು ಅದ್ಭುತ ಗುರಿಗಾರನೆನ್ನಲು ಸಂದೇಹವಿಲ್ಲ. ನಾನು ಎರಡು ಕೈಗಳಿಂದಲೂ ಗುರಿ ತಪ್ಪದೆ ಬಾಣ ಬಿಟ್ಟು ಆಕಾಶದಲ್ಲಿ ಹಾರುವ ಪಕ್ಷಿಗಳನ್ನು ಕೆಡವಬಲ್ಲೆ. ಎರಡು ಕಣ್ಣೂ ಕಾಣದ ನೀನು ನನಗಿಂತಲೂ ಹೆಚ್ಚಿನವನೆನ್ನಲು ಸಂದೇಹವಿಲ್ಲ. ಶಬ್ದದ ಗುರಿಹಿಡಿದು ಬಾಣ ಪ್ರಯೋಗ ಮಾಡಲು ನನ್ನಿಂದಾಗದು" ಎಂದನು.

ಅದಕ್ಕೆ ಕುರುಡನೆಂದ: "ಹೌದಪ್ಪ. ಕಿವಿಯ ಹೊರತು ನನಗೆ ಬೇರೆ ಕಣ್ಣಿಲ್ಲ. ಅದಕ್ಕೇ ನನ್ನನ್ನು ಶಬ್ದವೇಧಿ ಅನ್ನುತ್ತಾರೆ. ಈ ವಿದ್ಯೆಯನ್ನು ಕಣ್ಣು ಸರಿಯಾಗಿದ್ದವರು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು

ಪ್ರದರ್ಶಿಸುತ್ತಾರೆ. ಆದರೆ ನನ್ನಂತೆ ಹುಟ್ಟು ಕುರುಡನಾಗಿದ್ದು ಶಬ್ದವೇಧಿ ವಿದ್ಯೆ ಸಾಧಿಸಿದವನು ಪ್ರಪಂಚದಲ್ಲೆಲ್ಲಿಯೂ ಇರಲಿಕ್ಕಿಲ್ಲ. ಎಂದಿಗೂ ನನ್ನ ಗುರಿ ತಪ್ಪುವುದಿಲ್ಲ."

"ನಿನ್ನಂತಹ ದೊಡ್ಡ ಬಿಲ್ಲಾಳುಗಳನ್ನು ಹುಡುಕುತ್ತ ಹೊರಟವನು ನಾನು. ನೀನೊಬ್ಬ ನನಗಿಂತ ಮಿಗಿಲಾಗಿರುವುದನ್ನು ನೋಡಿದೆ. ಇನ್ನೂ ಹುಡುಕಬೇಕು. ಬಿಲ್ಲು ವಿದ್ಯೆಯಲ್ಲಿ ಇನ್ನೂ ಎಷ್ಟು ಬಗೆಯ ಶಕ್ತಿಗಳಿವೆಯೋ ತಿಳಿಯುವುದು ಒಳ್ಳೆಯದಲ್ಲವೆ ?" ಎಂದ ಸವ್ಯಸಾಚಿ.

"ನಡೆ, ನಾನೂ ನಿನ್ನೊಂದಿಗೆ ಬರುತ್ತೇನೆ" ಎಂದ ಶಬ್ದವೇಧಿ. ಹೀಗೆ ಇಬ್ಬರೂ ಕೂಡಿ ಅಲ್ಲಿಂದ ಹೊರಟರು. ಧರ್ಮಪುರಕ್ಕೆ ಸೇರಿಕೊಂಡಿದ್ದ ಒಂದು ಕಾಡು ದಾರಿಯಲ್ಲಿ ಅವರು ಹೋಗುತ್ತಿದ್ದಾಗ, ವಿಚಿತ್ರವೊಂದನ್ನು ನೋಡಿದರು. ಬಿದಿರು ಮೆಳೆಯ ನೆರಳಿನಲ್ಲಿ ಎರಡು ಕೈಗಳೂ ಇಲ್ಲದವನೊಬ್ಬ ಕುಳಿತಿದ್ದ. ಅವನು ಎಡಗಾಲಿನ ಬೆರಳಿನಲ್ಲಿ ಬಿಲ್ಲು ಹಿಡಿದುಕೊಂಡು ಬಾಯಿಯಿಂದ ಬಾಣವನ್ನು ಹಿಡಿದು ಎಳೆದು ಎಲ್ಲಿಗೋ ಬಿಟ್ಟ. ರೊಯ್ಯನೆ ಹೋದ ಆ ಬಾಣ ಮರದ ಮೇಲಿದ್ದ ಗೊರವಂಕಗಳ ಜತೆಯನ್ನು ಹೊಡೆದುರುಳಿಸಿತು. ಎರಡು ಗೊರವಂಕಗಳೂ ನೆಲಕ್ಕೆ ಬಿದ್ದು ಪ್ರಾಣ ಬಿಟ್ಟುವು. ಇದು ಅಸಾಧಾರಣವಾದ ಶಕ್ತಿಯೇ ಸರಿ.

ಈ ಅದ್ಭುತವನ್ನು ನೋಡಿ ಸವ್ಯಸಾಚಿ ತಾನು ನೋಡಿದುದನ್ನು ಕುರುಡನಿಗೆ ತಿಳಿಯಪಡಿಸಿದನು. ಆಗ ಕುರುಡನು ಅತ್ಯಾಶ್ಚರ್ಯಪಡುತ್ತ, "ಇವನು ನಮ್ಮಿಬ್ಬರಿಗಿಂತಲೂ ಹೆಚ್ಚಿನವನಪ್ಪಾ. ಎರಡು ಕೈಗಳೂ ಇಲ್ಲದವನು ಬಾಣ ಬಿಡುವುದೆಂದರೇನು ? ಅದ್ಭುತವೇ ಸರಿ !" ಎಂದನು.

ಅವನನ್ನು ಮಾತಾಡಿಸಲು ಇಬ್ಬರೂ ಆ ಮೊಂಡನ ಬಳಿಗೆ ಹೋದರು. ಅವನ ಚಾತುರ್ಯವನ್ನು ತುಂಬ



ಹೊಗಳುತ್ತ, "ಕೈಗಳೇ ಇಲ್ಲದವನು ಬಾಣಪ್ರಯೋಗ ಮಾಡುವುದನ್ನು ನಾವೆಲ್ಲಿಯೂ ನೋಡಿಲ್ಲ, ಕೇಳಿಲ್ಲ. ನಿನ್ನ ಗುರಿ ಕೂಡ ಅದ್ಭುತ !" ಎಂದರು.

ಹಾಗೆಯೇ ಅವರಿಬ್ಬರೂ ತಮ್ಮ ತಮ್ಮ ಪರಿಚಯವೊಂಡನಿಗೆ ತಿಳಿಸಿ ತಮಗಿರುವ ಬಿಲ್ಲುಗಾರಿಕೆಯ ಚಾತುರ್ಯವನ್ನೂ ಹೇಳಿದರು.

"ಹೌದು, ನನ್ನಂಥ ಮೊಂಡ ಬಿಲ್ಲುಗಾರ ಇರಲಿಕ್ಕಿಲ್ಲ. ಆದುದರಿಂದ ಕಾಲಿನಿಂದ ಬಿಲ್ಲು ಹಿಡಿದು ಬಿಡುವವನೂ ಇರಲಿಕ್ಕಿಲ್ಲ. ನನ್ನ ಗುರಿ ಕೂಡಾ ಎಂದಿಗೂ ತಪ್ಪಲಾರದು. ನಿಮ್ಮ ಹಾಗೆ ನನಗೆ ಕೈಗಳಿರುತ್ತಿದ್ದರೆ, ನಾನು ಎರಡು ಕಾಲುಗಳಿಂದಲೂ, ಎರಡು ಕೈಗಳಿಂದಲೂ ಬಾಣ ಬಿಡುತ್ತಿದ್ದೆ." ಎಂದ ಹೆಮ್ಮೆಯಿಂದ ಆ ಮೊಂಡ.

ಸವ್ಯಸಾಚಿ ಉಳಿದಿಬ್ಬರನ್ನು ಕುರಿತು, "ಅಂತೂ ನಾವು ಮೂವರೂ ಒಂದೊಂದು ವಿಧದಲ್ಲಿ ಪ್ರಜ್ಞಾವಂತರೇ. ಆದರೆ ನಮ್ಮ ಪ್ರಜ್ಞೆ ಲೋಕಕ್ಕೆ ತಿಳಿಯದೆ



ಹೋದರೆ ಏನು ಪ್ರಯೋಜನವಿದೆ ? ಆದುದರಿಂದ ನಾವು ಮೂವರೂ ಧರ್ಮಪುರದ ಮಹಾರಾಜನ ಬಳಿಗೆ ಹೋಗಿ, ನಮ್ಮ ಬಿಲ್ಲು ವಿದ್ಯೆಯನ್ನು ಪ್ರದರ್ಶಿಸೋಣ. ಅದರಿಂದ ನಮಗೆ ಕೀರ್ತಿಯೂ ಬಹುಮಾನವೂ ಸಿಗುತ್ತವೆ. ನಮ್ಮ ಜಾಣ್ಮೆ ಕಾಡು ಬೆಳದಿಂಗಳಿನಂತೆ ವ್ಯರ್ಥವಾಗಬೇಕೆ ? ಹೋಗೋಣವೆ ? ಏನನ್ನುವಿರಿ ? " ಎಂದನು.

"ನಿಜವೇ. ರಾಜನು ನಮಗೆ ಬಹುಮಾನ ಕೊಡುವುದು ಖಂಡಿತ. ಅದನ್ನು ನಾವು ಹೇಗೆ ಹಂಚಿಕೊಳ್ಳಬೇಕೆಂಬುದನ್ನು ಕೂಡ ಈಗಲೇ ನಿರ್ಣಯಿಸಿಬಿಡೋಣ. ಆಮೇಲೆ ತಕರಾರು ಮಾಡಿಕೊಳ್ಳುವುದು ಬೇಡ." ಎಂದ ಮೊಂಡ.

"ಇದರಲ್ಲಿ ತಕರಾರಿಗೇನಿದೆ ? ನಾವು ಮೂವರೂ ಒಟ್ಟಾಗಿದ್ದು ಸಮನಾಗಿ ಅನುಭವಿಸೋಣ. ಇದರಲ್ಲಿ ಹೆಚ್ಚು ಕಡಿಮೆ ಮಾಡುವುದೇಕೆ ? " ಎಂದ ಸವ್ಯಸಾಚಿ. ಆದರೆ ಮೊಂಡನು ಗುಣದಲ್ಲಿಯೂ ಮೊಂಡನೇ ಆಗಿದ್ದ. ಅವನು ಅದಕ್ಕೆ ಒಪ್ಪಲಿಲ್ಲ. "ರಾಜನು ಕೊಡುವ ಬಹುಮಾನವನ್ನು ನಾವು ಬೇರೆ ಬೇರೆಯಾಗಿಯೇ ತೆಗೆದುಕೊಂಡರೆ, ನನಗೇ ದೊಡ್ಡ ಬಹುಮಾನ ಬರುವುದೆನ್ನಲು ಸಂದೇಹವಿಲ್ಲ. ನೀವಿಬ್ಬರೂ ಕೈಗಳಿರುವ ಬಿಲ್ಲಾಳುಗಳು. ನಾನು ಕೈಗಳೇ ಇಲ್ಲದ ಬೋಳು ಮೊಂಡ ಗೊತ್ತಾ ? " ಎಂದ ಮೊಂಡ.

"ಅದೇನು ಮಾತು ? ರಾಜನು ನನಗೇ ದೊಡ್ಡ ಬಹುಮಾನ ಕೊಡಲೂ ಬಹುದು. ಏಕೆಂದರೆ ನೀವಿಬ್ಬರೂ ಕಣ್ಣುಗಳಿರುವ ಬಿಲ್ಲಾಳುಗಳು. ನಾನು ಹುಟ್ಟು ಕುರುಡ. ಆದುದರಿಂದ ನಾನೇ ಹೆಚ್ಚಿನವನೆಂದು ರಾಜನು ತೀರ್ಮಾನಿಸಿದರೆ ಯಾಕಾಗಬಾರದು ? " ಎಂದ ಶಬ್ದವೇಧಿ.

ಈ ತಕರಾರು ನೋಡಿ ಸವ್ಯಸಾಚಿಗೆ ಬೇಸರ ಬಂದಿತು. "ಯಾರ ವಿದ್ಯೆ ಎಂತಹುದೋ ಎಂದು ರಾಜನೇ ನಿರ್ಣಯಿಸುತ್ತಾನೆ. ಮೊದಲೇ ತಕರಾರು ಬೇಡ. ನಡೆಯಿರಿ " ಎಂದನು.

ಸ್ವಲ್ಪ ದೂರದಲ್ಲಿ ಈ ವಾದವಿವಾದಗಳನ್ನು ಲಕ್ಷ್ಯಗೊಟ್ಟು ಕೇಳುತ್ತಾ ಇದ್ದ ಬೇಡರ ಹುಡುಗಿಯೊಬ್ಬಳು, ಈಗ ಆ ಮೂವರು ಬಿಲ್ಲಾಳುಗಳ ಸಮೀಪ ಬಂದು, "ಧರ್ಮಪುರದ ರಾಜನು ನಿಮ್ಮ ಬಿಲ್ಲು ವಿದ್ಯೆಗಳಿಗೆ ಬೇರೆ ಬೇರೆ ಬಹುಮಾನ ಕೊಡಲಾರ. ಒಟ್ಟಿಗೇ ಒಂದು ಮೊತ್ತವನ್ನು ಕೊಡುತ್ತಾನೆ. ಅದನ್ನು ಹೇಗೆ ಹಂಚಿಕೊಳ್ಳಬೇಕೆಂಬುದನ್ನು ನೀವು ಮೊದಲೇ ನಿರ್ಣಯಿಸಿಕೊಳ್ಳುವುದು ಒಳ್ಳೆಯದು " ಎಂದಳು.

ಅವಳ ಮಾತು ಕೇಳಿ ಸವ್ಯಸಾಚಿ ಕೋಪದಿಂದ, "ನೀನು ನಮ್ಮೊಳಗೆ ಭೇದ ಹೆಚ್ಚಿಸಲು ಹುಲ್ಲು ಹಾಕುವೆಯಾ ? ಮಹಾರಾಜನು ಆಗಲೇ ಬಹುಮಾನ ಕೊಟ್ಟಂತೆಯೂ, ನಾವು ತಕರಾರು ಮಾಡುತ್ತಿರುವಂತೆಯೂ ಹೇಳಿಬಿಟ್ಟೆ. ನಡೆ ನಡೆ ! " ಎಂದ. ಆ ಮಾತಿಗೆ ಬೇಡರ ಹುಡುಗಿ ಅಲಕ್ಷ್ಯದಿಂದ ಕಿಲಕಿಲನೆ

ನಕ್ಕಳು. "ನಗಲಿಕ್ಕೇನಾಯಿತು?" ಎಂದು ಶಬ್ದವೇಧಿ ಕೋಪದಿಂದ ಅವಳನ್ನು ಕೇಳಿದ.

"ಏನಾಯಿತೆಂದು ಕೇಳುವೆಯಾ? ನೀನೋ ಕುರುಡ. ಇನ್ನೊಬ್ಬನಿಗೆ ಕೈಗಳಿಲ್ಲ. ಕೈಗಳೂ ಕಾಲುಗಳೂ ಇರುವವನು ನಿಮ್ಮಿಬ್ಬರನ್ನೂ ಮೀರಿಸಿ ಎಲ್ಲಾ ಬಹುಮಾನವನ್ನೂ ತಾನೇ ತಟ್ಟಿಕೊಳ್ಳಬೇಕೆಂದು ನೋಡುತ್ತಾನೆ. ಅದಕ್ಕಾಗಿಯೇ ನಿಮ್ಮೊಳಗಿನ ಹೆಚ್ಚು ಕಡಿಮೆಗಳನ್ನು ನಿರ್ಣಯಿಸಿಕೊಳ್ಳಲು ನೀವಿಬ್ಬರೂ ಒಪ್ಪುವುದಿಲ್ಲ. ಇದನ್ನು ನೋಡಿದರೆ ನಾನು ನಗದೆ ಏನು ಮಾಡಲಿ?" ಎಂದಳು.

ಅವಳ ಮಾತು ಕೇಳಿ ಮೊಂಡನೆಂದ: "ಆಹಾ! ಚೆನ್ನಾಗಿ ಹೇಳಿದೆ. ನಮ್ಮ ಹೆಚ್ಚುಕಡಿಮೆಗಳನ್ನು ನಾವೇ ನಿರ್ಣಯಿಸುವುದು ಸಾಧ್ಯವೆಂದು ಕಾಣದು. ನಮ್ಮಲ್ಲಿ ಯಾರು ಹೆಚ್ಚಿನವರೆಂಬುದು ನೀನೇ ನಿರ್ಣಯಿಸಿ ಹೇಳಿಬಿಡು ನೋಡುವಾ. ನಿನ್ನ ನಿರ್ಣಯಕ್ಕೆ ನಾವು ಮೂವರೂ ಒಪ್ಪಿಕೊಳ್ಳುತ್ತೇವೆ. ರಾಜನೂ ಬೇಡ. ಮಂತ್ರಿಯೂ ಬೇಡ."

"ಹಾಗಿದ್ದರೆ ನೀವು ಮೂವರೂ ನಿಮ್ಮ ನಿಮ್ಮ ಸಾಮರ್ಥ್ಯವನ್ನು ನನ್ನ ಮುಂದೆ ತೋರಿಸಿರಿ" ಎಂದಳು ಬೇಡರ ಹುಡುಗಿ.

ಮೂವರೂ ಅದಕ್ಕೆ ಒಪ್ಪಿಕೊಂಡರು. ಮೊಂಡನು ಕಾಲಿನಿಂದ ಬಿಲ್ಲು ಹಿಡಿದು, ಬಾಯಿಯಿಂದ ಬಾಣ ಹೂಡಿ, ಆಗಲೇ ಮರದಲ್ಲಿ ಬಂದೆರಗಿದ ಒಂದು ಹಕ್ಕಿಯನ್ನು ಹೊಡೆದ. ಕುರುಡನು ಇನ್ನೊಂದು ಮರದಮೇಲೆ ಕೂಗುತ್ತಿದ್ದ ಒಂದು ಹಕ್ಕಿಗೆ ಬಾಣ ಬಿಟ್ಟು ಕೊಂದು ಕೆಡವಿದ. ಸವ್ಯಸಾಚಿ ಎರಡು ಕೈಗಳಿಂದಲೂ ಎರಡು ಬಾಣಗಳನ್ನು ಬಿಟ್ಟು, ಆಕಾಶದಲ್ಲಿ ಹಾರುವ ಎರಡು ಪಕ್ಷಿಗಳನ್ನು ನೆಲಕ್ಕೆ ಕೆಡವಿದ.

ಇದನ್ನೆಲ್ಲಾ ನೋಡಿದ ಬೇಡರ ಹುಡುಗಿ ಎಲ್ಲರಿಗಿಂತ ಸವ್ಯಸಾಚಿಯೇ ಹೆಚ್ಚಿನ ಬಿಲ್ಲುಗಾರನೆಂದೂ, ಶಬ್ದವೇಧಿ ಎರಡನೇಯವನೆಂದೂ ಹೇಳಿ ಅಲ್ಲಿಂದ



ಕದಲಿದಳು. ಕೂಡಲೇ ಮೊಂಡ ಕೋಪದಿಂದ "ನಿಲ್ಲು!" ಎಂದು ಕೂಗಿ, "ನಿನಗೇನು ಗೊತ್ತಿದೆ? ಕಾಡಿನಲ್ಲಿ ಬದುಕುವವಳು ನೀನು. ನಿನಗೆ ಬಿಲ್ಲುವಿದ್ಯೆ ಏನೆಂಬುದಾದರೂ ಗೊತ್ತಿದೆಯೆ? ನಿನ್ನ ನಿರ್ಣಯವನ್ನು ನಾವು ಒಪ್ಪುವುದಿಲ್ಲ!" ಎಂದನು.

"ನನ್ನ ನಿರ್ಣಯ ಒಪ್ಪದಿದ್ದರೆ ಬಿಡಿರಿ. ತೀರ್ಪು ಹೇಳುವಂತೆ ನನ್ನನ್ನು ಕೇಳಿದ್ದು ಕೂಡಾ ನೀವೇ. ಇನ್ನು ಬಿಲ್ಲುವಿದ್ಯೆ ಕುರಿತು ನನಗೇನು ಗೊತ್ತಿದೆ ಎಂದು ಕೇಳುವವನು ನೀನು ತಾನೇ? ನೋಡು. ನಿನ್ನ ಬಿಲ್ಲನ್ನೂ ಬಾಣವನ್ನೂ ಇತ್ತ ಕೊಡು" ಎಂದು ಹೇಳಿ ಬೇಡರ ಹುಡುಗಿ ಮೊಂಡನ ಕೈಯಿಂದ ಬಿಲ್ಲು ಬಾಣಗಳನ್ನು ತೆಗೆದುಕೊಂಡಳು.

ಅವಳು ಮರದ ಮೇಲಿರುವ ಗೊರವಂಕಗಳ ಜೋಡಿಯನ್ನು ತೋರಿಸಿ, "ಅವುಗಳ ನಡುವೆ ಎಷ್ಟು ಸ್ಥಳವಿದೆ ನೋಡು" ಎನ್ನುತ್ತಾ ಬಾಣದ ಗುರಿ ಹಿಡಿದಳು. "ಆ ಪ್ರೇಮದ ಪಕ್ಷಿಗಳನ್ನು ಕೊಲ್ಲುವಿ

ಯೇನು ?" ಎಂದು ಮೊಂಡನು ಎಗತಾಳಿಯಾಗಿ ಕೇಳಿದ. "ನೋಡು" ಎಂದು ಅವಳು ಬಾಣಬಿಟ್ಟಳು. ಅದು ಎರಡು ಗೊರವಂಕಗಳ ನಡುವಿನಿಂದ ತೂರಿ ಕೊಂಡು ಹೋಯಿತು. ಈ ಸಂಗತಿ ಆ ಪಕ್ಷಿಗಳಿಗೆ ಗೊತ್ತೇ ಆಗಲಿಲ್ಲ.

ಇದನ್ನು ನೋಡಿ ಮೊಂಡನೂ ಸವ್ಯಸಾಚಿಯೂ ಮೂಕವಿಸ್ಮಿತರಾದರು. ಬೇಡರ ಹುಡುಗಿ ಬಿಲ್ಲನ್ನು ಮೊಂಡನ ಕೈಗೆ ಕೊಟ್ಟು ತನ್ನ ಪಾಡಿಗೆ ಹೊರಟು ಹೋಗಿಬಿಟ್ಟಳು.

ನಡೆದ ಸಂಗತಿಯನ್ನೆಲ್ಲಾ ಶಬ್ದವೇಧಿಯೂ ಕೇಳಿ ತಿಳಿದಮೇಲೆ, ಆ ಮೂವರು ಬಿಲ್ಲಾಳುಗಳೂ ರಾಜ ದರ್ಶನದ ಮಾತನ್ನು ಚೆಲ್ಲಿಗೊಟ್ಟು, ಹಿಂದಿರುಗಿ ಹೋಗಿಬಿಟ್ಟರು."

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಬೇಡರ ಹುಡುಗಿ ತನ್ನ ಬಿಲ್ಲುವಿದ್ಯೆಯನ್ನು ತೋರಿಸಿದಳಷ್ಟೆ? ಅವಳು ಮೂವರು ಬಿಲ್ಲಾಳುಗಳ ಹೆಚ್ಚು ಕಡಿಮೆಗಳನ್ನು ಹಾಗೇಕೆ ಹೇಳಿದಳು? ಅವರು ಹಾಗೇಕೆ ಹಿಂದಿರುಗಿ ಹೋದರು? ಈ ಪ್ರಶ್ನೆಗಳಿಗೆ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಯೊಡೆದುಹೋಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನೆಂದ: "ಬೇಡರ ಹುಡುಗಿ ಹೇಳಿದ ತೀರ್ಪಿನಲ್ಲಿ ತಪ್ಪಾದುದೇನಿಲ್ಲ. ಉಳಿದಿಬ್ಬರಿಗಿಂತಲೂ ಸವ್ಯಸಾಚಿಯೇ ದೊಡ್ಡ ಬಿಲ್ಲುಗಾರನೆನ್ನಲು ಸಂದೇಹವಿಲ್ಲ. ಏಕೆಂದರೆ ಮನಸ್ಸು ಮಾಡಿದರೆ ಅವನು ಉಳಿದಿಬ್ಬರ ಚಾತುರ್ಯಗಳನ್ನೂ ಸಾಧಿಸಿ ತೋರಿಸಲು ಸಾಧ್ಯವುಂಟು. ಆದರೆ ಅವರಿಬ್ಬರು ಅವನಹಾಗೆ ಸವ್ಯಸಾಚಿ ಎನಿಸಲು ಸಾಧ್ಯವೇ ಇಲ್ಲ. ಕುರುಡನು ಶಬ್ದವಿಲ್ಲದ ಗುರಿಯನ್ನು ಹೊಡೆಯಲಾರ. ಮೊಂಡನು ಬೇರೆ ಉಪಾಯವಿಲ್ಲದೆ ಕಾಲಿನಿಂದಲೋ ಬಾಯಿಯಿಂದಲೋ ಬಾಣ ಹೊಡೆಯಲು ಕಲಿತವನು. ಸವ್ಯಸಾಚಿಯು ಹೊರತು ಉಳಿದಿಬ್ಬರೂ ಗುರಿಗಾರರೇ ಹೊರತು ದೊಡ್ಡ ಬಿಲ್ಲುಗಾರರಲ್ಲ. ಕಡೆಗೆ ಅವರು ರಾಜನ ಬಳಿಗೆ ಏಕೆ ಹೋಗಲಿಲ್ಲವೆಂದರೆ, ಆ ಅರಣ್ಯದಲ್ಲಿ ಬಿಲ್ಲುಗಾರರಾಗಿ ತಿರುಗುವ ಇತರ ಬೇಡರಿಗೆ ಎಷ್ಟೆಲ್ಲ ಸಾಮರ್ಥ್ಯವಿದೆಯೆಂಬುದನ್ನು ಆ ಬೇಡರವಳೊಬ್ಬಳಿಂದಲೇ ಊಹಿಸಬಹುದು. ತನ್ನ ನಗರದ ಬಳಿಯ ಅರಣ್ಯದಲ್ಲಿ ಅಂತಹ ಬಿಲ್ಲುಗಾರರಿರುವಾಗ ತಮ್ಮಿಂದ ರಾಜನನ್ನು ಮೆಚ್ಚಿಸಲು ಸಾಧ್ಯವೆಂದು ಸವ್ಯಸಾಚಿಯೇ ಮೊದಲಾದವರಿಗೆ ತೋರಲಿಲ್ಲ. ಅದಕ್ಕೇ ಅವರು ಆ ಪ್ರಯತ್ನ ಬಿಟ್ಟು ಹಿಂದಿರುಗಿದರು."

ಹೀಗೆ ರಾಜನಿಗೆ ಮೌನಭಂಗವಾದ ಮರುಕ್ಷಣದಲ್ಲಿ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಕೆಡಿಸುವವನೇ ಕೆಡುವನು

ಒಂದು ಊರಿನಲ್ಲಿ ಸೀತಾಪತಿ ಮತ್ತು ಲಕ್ಷ್ಮೀಪತಿ ಎಂಬ ಇಬ್ಬರು ಅತ್ತರು ವರ್ತಕರಿದ್ದರು. ಪ್ರಾಮಾಣಿಕನಾದ ಸೀತಾಪತಿ ಉತ್ತಮ ಅತ್ತರುಗಳನ್ನೇ ಮಾರುತ್ತಿದ್ದ.

ಆದರೆ ಲಕ್ಷ್ಮೀಪತಿ ದುರಾಶೆಯಿಂದ ಅತ್ತರಿನಲ್ಲಿ ಕಲಬೆರಕೆ ಮಾಡಿ ಮಾರುತ್ತಿದ್ದ. ಆದುದರಿಂದ ಅವನ ವ್ಯಾಪಾರವು ಕ್ರಮವಾಗಿ ಇಳಿಮುಖವಾಗಿ ಕಡೆಗೆ ಬಿದ್ದುಹೋಯಿತು. ತನ್ನ ಹಾಗೆ ಕಲಬೆರಕೆಮಾಡಿ ಮಾರುವಂತೆ ಅವನು ಸೀತಾಪತಿಗೆ ಹೇಳಿದರೂ ಅವನು ಹಾಗೆ ಮಾಡಲಿಲ್ಲ. ಆದುದರಿಂದ ಲಕ್ಷ್ಮೀಪತಿಗೆ ಅವನ ಮೇಲೆ ಅಸೂಯೆ ಹೆಚ್ಚಿತು.

ಸೀತಾಪತಿಯ ಮಗ ರಾಮುನಿಗೆ ದುಬಾರಿ ಖರ್ಚಿನ ಗೀಳು ಹತ್ತಿಸಿ ಅವನ ಮೂಲಕ ಸೀತಾಪತಿಯ ವ್ಯಾಪಾರ ಕೆಡಿಸಬೇಕೆಂದುಕೊಂಡು, ಲಕ್ಷ್ಮೀಪತಿ ಆ ಹುಡುಗನಿಗೆ ಆಗಾಗ ಹಣಕೊಡಲು ಪ್ರಾರಂಭಿಸಿದ. ರಾಮು ಕೂಡಾ ಆ ಹಣ ತೆಗೆದುಕೊಳ್ಳುತ್ತಾ ಬಂದ.

ಹೀಗೆ ಸ್ವಲ್ಪಕಾಲ ಕಳೆಯಲು ಲಕ್ಷ್ಮೀಪತಿ ರಾಮುನೊಂದಿಗೆ, '' ನಿಮ್ಮ ಮನೆಯಲ್ಲಿ ಕೇದಿಗೆ ಅತ್ತರಿನ ಸೀಸೆಗಳಿದ್ದರೆ ತಾ '' ಎಂದ. ದುಡ್ಡು ಕೊಟ್ಟರೆ ತರುತ್ತೇನೆಂದು ಅವನು ಹೇಳಲು, ಲಕ್ಷ್ಮೀಪತಿ ದುಡ್ಡು ಕೊಟ್ಟ. ರಾಮು ಸೀಸೆಗಳನ್ನು ತಂದುಕೊಟ್ಟ.

'' ನಾನು ಕೊಡುವ ಹಣವೆಲ್ಲ ಏನುಮಾಡಿದೆ? '' ಎಂದು ಲಕ್ಷ್ಮೀಪತಿ ರಾಮುನನ್ನು ಕೇಳಲು, '' ಅದನ್ನೆಲ್ಲ ಅಪ್ಪನಿಗೇ ಕೊಡುತ್ತಾ ಬಂದೆ '' ಎಂದ ರಾಮು. ತನ್ನ ಉಪಾಯ ನಡೆಯದೆ ಹೋದುದಕ್ಕೆ ಲಕ್ಷ್ಮೀಪತಿ ಹತಾಶನಾದ.





# ಬದುಕುವ ದಾರಿ

ಒಂದು ಊರಿನಲ್ಲಿ ವಿನಯನೆಂಬ ಯುವಕನಿಗೆ ಸಾಲದಿಂದ ಇದ್ದುದೆಲ್ಲಾ ಹೋಯಿತು. ಬದುಕುವ ದಾರಿ ಕಾಣದೆ ರಾತ್ರಿ ನಿದ್ದೆ ಬಾರದೆ, ಎದ್ದು ಹೊಲ ಗದ್ದೆಗಳ ಬದಿಯ ದಾರಿಯಲ್ಲಿ ನಗರದಕಡೆಗೆ ನಡೆಯುತ್ತಾ ಇದ್ದ.

ಆಗ ಅವನಿಗೆ ಒಂದು ದೃಶ್ಯವು ಕಂಡಿತು. ಒಂದು ಮರದ ಕೆಳಗೆ ಕಳ್ಳನೊಬ್ಬ ಕುಳಿತುಕೊಂಡು ತಾನು ಆ ರಾತ್ರಿ ಕದ್ದುಕೊಂಡು ಬಂದಿದ್ದ ಹಣವನ್ನು ಕೆಳಗೆ ಹರಡಿ ಬಗ್ಗಿ ತಡವಿ ತಡವಿ, ಬಾಯಿಯಿಂದ ಸಂಖ್ಯೆಗಳನ್ನು ಮೆಲ್ಲನೆ ಗುಣುಗುತ್ತಾ ಎಣಿಸುತ್ತಿದ್ದ. ಅದನ್ನು ನೋಡಿ ವಿನಯ ಅಲ್ಲೇ ನಿಂತ.

ಹಣದ ಶಬ್ದ ಕೇಳುತ್ತಲೇ ವಿನಯನ ಕಣ್ಣು ಕಿವಿಗಳು ಚುರುಕಾದುವು. ಅವನು ಬೆಕ್ಕಿನ ಹೆಜ್ಜೆಗಳಿಂದ ಕಳ್ಳ ಕುಳಿತಿದ್ದ ಮರದ ಬುಡಕ್ಕೇ ಹೋಗಿ ಅಡಗಿ ಕುಳಿತ. ಯಾವುದಾದರೂ ಉಪಾಯದಿಂದ ಕಳ್ಳನ ಹಣವನ್ನೆಲ್ಲ ವಶಪಡಿಸಿಕೊಳ್ಳಬೇಕೆಂಬುದು ಅವನ ಉದ್ದೇಶವಾಗಿತ್ತು.

ಕಳ್ಳ ಹಣ ಎಣಿಸುವುದನ್ನು ಮುಗಿಸಿ, ಅದನ್ನು ಒಂದು ಚೀಲದಲ್ಲಿ ಹಾಕಿ ತಲೆಯ ಬುಡದಲ್ಲಿಟ್ಟುಕೊಂಡು ಮಲಗಿ, ಎರಡುಸಾರಿ ಆಕಳಿಸಿ, ಸ್ವಲ್ಪ ಹೊತ್ತಿಗೆ ಗೊರಕೆ ಹೊಡೆಯಲು ತೊಡಗಿದ.

ಕಳ್ಳನಿಗೆ ಗಾಢ ನಿದ್ದೆ ಬಂದಿರುವುದೆಂದು ಗಟ್ಟಿ ಮಾಡಿಕೊಂಡು ವಿನಯ ಮೆಲ್ಲನೆ ಕೈ ಚಾಚಿ ಹಣದ ಚೀಲವನ್ನು ಎಳೆಯತೊಡಗಿದ. ಆಗ ಅವನ ಎಣಿಕೆ ತಪ್ಪಾಯಿತು. ಫಟೀಲನೆ ಅವನ ಕೈಯ ಮೇಲೆ ಪೆಟ್ಟು ಬಿತ್ತು. ಆ ಪೆಟ್ಟಿಗೆ ವಿನಯ ಹಣದ ಚೀಲವನ್ನು ಬಿಟ್ಟು ಮುಂದಕ್ಕೆ ಮುಗ್ಗರಿಸಿ ಬಿದ್ದ.

ಕಳ್ಳ ಅವನ ಜುಟ್ಟು ಹಿಡಿದು ಎಬ್ಬಿಸಿ, "ಛೆ! ಒಂದು ಕಳ್ಳತನ ಕೂಡ ಹೇಗೆ ಮಾಡಬೇಕೆಂದು ಗೊತ್ತಿಲ್ಲದ ಹೆಡ್ಡ! ನಾಚಿಕೆಯಿಲ್ಲವೆ? ಏನಾದೀತು ನಿನ್ನಿಂದ?" ಎಂದ ಕೋಪದಿಂದ.

"ಕಳ್ಳತನ ಮಾಡಲು ಗೊತ್ತಿಲ್ಲದೇನು?" ಎಂದು ವಿನಯ ಅಳು ಗೊರಲಿನಿಂದ ತಿರುಗಿ ಕೇಳಿದ.

"ನಿನ್ನ ಮುಖಕ್ಕೆ ಕಳ್ಳತನ ಬೇರೆಯೆ? ಕಳ್ಳನಾದವನು ಕಳ್ಳ ಸೊತ್ತನ್ನು ಹೊರಗೆ ಬಿಟ್ಟು ಮಲಗುತ್ತಾನೆಂದುಕೊಂಡೆಯಾ? ನೀನು ನಿಜವಾಗಿ ನುರಿತ ಕಳ್ಳನಾಗಿದ್ದರೆ ನನ್ನ ಕೈಗೆ ಸಿಕ್ಕುತ್ತಿದ್ದೆಯಾ? ನೀನು ಅಷ್ಟು ದೂರದಿಂದ ತಗ್ಗೀ ಬಗ್ಗೀ ಹೊಂಚಿ

ಎಂ. ಕೆ. ಈಶ್ವರರಾವು

ಬರುವುದನ್ನು ನೋಡಿ ಭಲೇ ಕಳ್ಳನೇನೋ ಎಂದು ಬಹಳ ಆಶೆಯಿಂದಿದ್ದೆ. ಸಿಕ್ಕಿಬಿದ್ದೆಯಲ್ಲಾ? ನೀನೆಂಥ ಕಳ್ಳ!" ಎಂದ ಕಳ್ಳ.

"ವಿಚಿತ್ರವಾಗಿದೆಯಲ್ಲಾ ನಿನ್ನ ಮಾತು? ನಿನಗೆ ಇನ್ನೊಬ್ಬ ಕಳ್ಳನೇಕೆ?" ಎಂದು ಕೇಳಿದ ವಿನಯ.

"ಉಂ. ಒಬ್ಬನೇ ಎಲ್ಲಾ ನೋಡಿಕೊಳ್ಳುವುದು ಕಷ್ಟವಾಗಿದೆ. ಅದಕ್ಕಾಗಿ ಒಬ್ಬ ಒಳ್ಳೆಯ ಜತೆಗಾರನಿಗಾಗಿ ನೋಡುತ್ತಿದ್ದೇನೆ. ನಿನ್ನ ಹಣೇಬರಹ ಗೊತ್ತಾಯಿತು" ಎಂದ ಕಳ್ಳ.

"ಬಹಳ ಒಳ್ಳೇದು! ನಾನೇನೂ ಅಂಥ ಪಡಪೋಸಿಯೆಂದು ತೀರ್ಮಾನಿಸಿಬಿಡಬೇಡ. ನಾನು ಕೂಡಾ ಬದುಕುವ ದಾರಿಯನ್ನೇ ಹುಡುಕುತ್ತಿದ್ದೇನೆ. ನನ್ನನ್ನು ನಿನ್ನ ಜತೆಗಾರನಾಗಿ ಇಟ್ಟುಕೊಂಡುಬಿಡು. ತೋರಿಸುತ್ತೇನೆ ನನ್ನ ಕೈ ಚಳಕ." ಎಂದ ವಿನಯ.

"ನಿನ್ನನ್ನೇ? ನೀನು ಈ ವೃತ್ತಿಗೆ ಸ್ವಲ್ಪ ಕೂಡ ಯೋಗ್ಯನಲ್ಲ" ಎಂದ ಕಳ್ಳ. ಅದನ್ನು ಕೇಳಿ ವಿನಯನು ನಿರಾಶನಾಗದೆ, "ಹಾಗನ್ನಬೇಡ. ನಾನು ಊರಲ್ಲಿ ಎಷ್ಟು ಮಂದಿಗೆ ಮೋಸ ಕೊಟ್ಟು ಹೊರಟು ಬಂದಿದ್ದೇನೆ ಗೊತ್ತಾ? ಸಾಲ ಮಾಡಿ, ಮಾಡಿ, ಯಾವುದನ್ನೂ ತೀರಿಸದೆ ಬಹಳ ಚಾತುರ್ಯದಿಂದ ಎಲ್ಲರಿಗೂ ಮೋಸಕೊಟ್ಟು ಪಾರಾಗಿ ಬಂದವನು ನಾನು." ಎಂದ ಹೆಮ್ಮೆಯಿಂದ.

"ನಿನ್ನ ತಲೆ! ನಾಳೆ ಅವರೆಲ್ಲಾ ನಿನ್ನನ್ನು ಹುಡುಕಿಕೊಂಡು ಬರುವುದಿಲ್ಲವೇನು? ನಿನ್ನನ್ನು ಸುಮ್ಮನೆ ಬಿಡುತ್ತಾರೇನು? ಒಂದುದಿನ ಸಿಕ್ಕಿಬೀಳುವೆ." ಎಂದು ನೆಗಾಡಿದ ಕಳ್ಳ.

"ಓಹೋ! ಅದುವೋ ನಿನ್ನ ಸಂದೇಹ? ಯಾರೂ ಬರುವುದಿಲ್ಲ. ಮೋಸಕೊಟ್ಟು ಬಂದೆನೆಂದರೆ ತಪ್ಪಿಸಿಕೊಂಡು ಬಂದೆನೆಂದುಕೊಂಡೆಯಾ? ನಾನು ಸಾಲ ತೀರಿಸಬೇಕಾದ ಗಡು ನಿನ್ನೆಗೆ ಮುಗಿಯಿತು. ಎಲ್ಲರಿಗೂ ಒಂದೊಂದು ಬಣ್ಣದಲ್ಲಿ ಮೂರು ನಾಮ ಹಾಕಿಬಿಟ್ಟೆ.



ನಾನು ಅವರ ಎದುರು ತಲೆಯೆತ್ತಿ ತಿರುಗಬಲ್ಲೆ. ಮುಖ್ಯವಾಗಿ ನಾನು ಮಾಡಿದ ಮೂರು ಮೋಸಗಳನ್ನು ಹೇಳುತ್ತೇನೆ. ಅದನ್ನು ಕೇಳಿದರೆ ನಿನಗೆ ಮೂರ್ಛೆ ಬರದಿದ್ದರೆ ಕೇಳು" ಎಂದು ವಿನಯನು ತನ್ನ ಮೋಸದ ಕರಾಮತಿಯನ್ನು ಹೇಳಿದನು.

ನಿನ್ನೆ ಬೆಳಿಗ್ಗೆ ವಿನಯನು ಬೀದಿಯಲ್ಲಿ ನಡೆಯುತ್ತ ಒಂದು ಸಂದು ದಾರಿಯಲ್ಲಿ ತಿರುಗುತ್ತಲೇ ಸುಬ್ಬಾಶಾಸ್ತ್ರಿ ಎದುರಾಗಿ ಬಂದ. ವಿನಯನು ಶಾಸ್ತ್ರಿಯನ್ನು ನೋಡದವನ ಹಾಗೆ ಮುಖವನ್ನು ಆಚೆಗೆ ತಿರುಗಿಸಿ ಪಕ್ಕದಲ್ಲಿರುವ ಮನೆಯನ್ನೇ ನೋಡುತ್ತಾ ಏನೋ ಎಣಿಕೆ ಹಾಕುವವನ ಹಾಗೆ ನಿಂತುಬಿಟ್ಟ.

ಸುಬ್ಬಾಶಾಸ್ತ್ರಿ ಅವನ ಬಳಿಗೆ ಬಂದು, ತೋಳು ಹಿಡಿದು, "ಏನಯ್ಯಾ ವಿನಯಾ? ನನ್ನ ನೋಡಿದ ಕೂಡಲೇ ಮುಖ ತಿರುಗಿಸಿ ಅತ್ತ ನೋಡುವಿಯಾ? ನನ್ನ ಕಣ್ಣಿಗೆ ಧೂಳು ಚೆಲ್ಲಬೇಕೆಂದು ಮಾಡಿದಿಯಾ?" ಎಂದು ಗರ್ಜಿಸಿದ.



ವಿನಯ ಆಗತಾನೇ ಸುಬ್ಬಾಶಾಸ್ತ್ರಿಯನ್ನು ನೋಡಿದಂತೆ ನಟಿಸುತ್ತ, "ಓಹ್! ನೀವೋ ಶಾಸ್ತ್ರಿಗಳೇ? ನಾನು ಕೂಡಾ ಇಂತಹುದೇ ಒಂದು ಮನೆ ಕಟ್ಟಿಸಬೇಕೆಂದಿದ್ದೇನೆ. ಆದರೆ ಈ ಮನೆಯ ಎತ್ತರ ಬಹಳ ಕಡಿಮೆ. ಯಾವ ಕಳ್ಳನಾದರೂ ಇಲ್ಲಿಂದಲೇ ಮಾಳಿಗೆಯ ಮೇಲೆ ಹಾರಿಬಿಡಬಹುದು. ಏನನ್ನುವಿರಿ?" ಎಂದ.

"ನಿನ್ನ ಯೋಗ್ಯತೆಗೆ ಮನೆ ಕಟ್ಟುವವನೋ ನೀನು? ಮೊದಲು ನನ್ನ ಐವತ್ತು ರೂಪಾಯಿ ನನಗೆ ಕೊಟ್ಟು ಮಾತಾಡು" ಎಂದ ಸುಬ್ಬಾಶಾಸ್ತ್ರಿ.

"ನಿಮ್ಮ ಐವತ್ತು ರೂಪಾಯಿತಾನೇ? ನನ್ನ ದೂರದ ಸಂಬಂಧಿಕಳಾದ ಮುದುಕಿಯೊಂದು ಸತ್ತು ಆಸ್ತಿಯನ್ನೆಲ್ಲಾ ನನ್ನ ಹೆಸರಿಗೆ ಮಾಡಿಹೋಗಿದೆ. ಅದ್ದರಿಂದಲೇ ಮನೆ ಕಟ್ಟುವ ಆಲೋಚನೆ ತಲೆ ತುಂಬಿ ಹೋಗಿದೆ. ನಿಮ್ಮ ಐವತ್ತು ಒಂದು ಲೆಖ್ಖವೆ? ನೀವೇ ಹೇಳಿ. ಈ ಸ್ಥಳದಿಂದ ಆ ಮಾಳಿಗೆಗೆ ಟಣ್ಣನೆ ಹಾರಲಿಕ್ಕೆ ಆಗುತ್ತೋ ಇಲ್ಲವೋ? ನಿಮಗೆ ಹೇಗೆ ಕಾಣುತ್ತದೆ?" ಎಂದ ವಿನಯ.

"ಸಾಧ್ಯವಿಲ್ಲ. ಮನುಷ್ಯನಾದವನು ಅಷ್ಟೆತ್ತರಕ್ಕೆ ಹಾರಲು ಸಾಧ್ಯವೇ ಇಲ್ಲ. ಬೇಕಾದರೆ ಅಲ್ಲಿಂದ ಬೀಳಬಹುದು" ಎಂದ ಸುಬ್ಬಶಾಸ್ತ್ರಿ.

"ಅಲ್ಲಾ, ನಿಮ್ಮ ಬುದ್ಧಿಗೆ ಏನಾಯಿತೋ? ಈಗ ನಾನೇ ಆ ಮಾಳಿಗೇ ಮೇಲೆ ಹಾರಿ ತೋರಿಸುತ್ತೇನೆ. ಐವತ್ತು ರೂಪಾಯಿ ಪಂಥ ಒಡ್ಡಿರಿ" ಎಂದ ವಿನಯ.

ಈ ಪಂಥದಿಂದ ಒಮ್ಮೆಗೇ ನೂರು ರೂಪಾಯಿ ವಸೂಲು ಮಾಡಿಕೊಳ್ಳಬಹುದೆಂದುಕೊಂಡು ಸುಬ್ಬಾಶಾಸ್ತ್ರಿ ಒಪ್ಪಿದ. ವಿನಯನು ಹಾರಲು ನೋಡಿ ಕೆಳಗೆ ಬಿದ್ದು, "ಈ ಪಂಥದಲ್ಲಿ ನಾನು ಸೋತೆ. ನಾನು ನಿಮಗೆ ಐವತ್ತು ಕೊಡಬೇಕಷ್ಟೆ? ನೀವು ನನ್ನಿಂದ ಐವತ್ತು ರೂಪಾಯಿ ಪಂಥ ಗೆದ್ದಿದ್ದೀರಿ. ಆ ಐವತ್ತಕ್ಕೆ ಈ ಐವತ್ತು ಸರೀಯಾಯ್ತು!" ಎಂದ.

ಸುಬ್ಬಾಶಾಸ್ತ್ರಿ ವಿನಯನ ಕೈಹಿಡಿದು, "ಏನು ಮಾತು ಇದು? ಐವತ್ತಕ್ಕೆ ಐವತ್ತು ಸರಿಹೋಯ್ತು ಅಂದರೆ ಏನರ್ಥ?" ಎಂದು ಕೇಳಲು, "ಅಷ್ಟೂ ತಿಳಿಯೋದಿಲ್ವೆ? ಐವತ್ತಕ್ಕೆ ಐವತ್ತು ಸರಿಯಾಗೋದಿಲ್ಲೇನು?" ಎಂದ ವಿನಯ.

ಸುಬ್ಬಾಶಾಸ್ತ್ರಿ ವಿನಯನನ್ನು ಎಳೆದುಕೊಂಡು ಗ್ರಾಮಾಧಿಕಾರಿಯ ಬಳಿಗೆ ಹೋದ. ಗ್ರಾಮಾಧಿಕಾರಿ ಮುಂಗೋಪಿ. ವಿನಯನು ಅವನನ್ನು ನೋಡಿ, "ನೀವೇ ಹೇಳಿ ಸ್ವಾಮಿ, ಐವತ್ತಕ್ಕೆ ಐವತ್ತು ಸರಿಹೋಗುತ್ತೋ ಇಲ್ವೋ?" ಎಂದ.

ಗ್ರಾಮಾಧಿಕಾರಿ ಹುಬ್ಬು ಸುರುಗಿಸಿಕೊಂಡು, "ಸರಿಹೋಗದೇನಾದೀತು? ದೊಡ್ಡ ಪ್ರಶ್ನೆ ಕೇಳಲಿಕ್ಕೆ ಬಂದಿರಾ?" ಎಂದ.

"ಅದು ಹೇಗೆ ಸರಿಹೋಗುತ್ತೆ? ಅರ್ಥ ಮಾಡಿಕೊಂಡರೆ ನಿಮಗೇ ತಿಳಿದೀತು" ಎಂದು ಶಾಸ್ತ್ರಿ ಏನೋ ಹೇಳಹೋದನು.

ಅಷ್ಟರೊಳಗೆ ಗ್ರಾಮಾಧಿಕಾರಿ ಕೋಪದಿಂದ, "ಯಾವನೋ ಅದು ಬುದ್ಧಿಗೆಟ್ಟವ? ನಾನು ಹೇಳುತ್ತೇನೆ, ಐವತ್ತಕ್ಕೆ ಐವತ್ತು ಸರಿಹೋಯಿತು ಅಂತ. ನನ್ನನ್ನೇ ತಪ್ಪು ಹೇಳುವೆಯಾ? ಕಾಲು ಮುರಿದು ಹಾಕಿಯೇನು. ನಡೆಯಯ್ಯ. ಈ ಕಡೆಗೆ ಮುಖ ತೋರಿಸಬೇಡ" ಎಂದು ಗರ್ಜಿಸಿದ.

ವಿನಯ ಸುಬ್ಬಾಶಾಸ್ತ್ರಿಯನ್ನು ಬಲವಂತವಾಗಿ ಅಲ್ಲಿಂದ ದೂರ ಕರೆದುಕೊಂಡು ಹೋಗಿ, "ಅವರೇ ಹೇಳಿದರಲ್ಲ? ಇನ್ನೂ ನಿಮ್ಮ ಮೊಂಡು ಹಟ ತೋರಿಸಿದರೆ ಕೊರಡೆ ಬಾರಿಸಿಬಿಡುತ್ತಾರೆ" ಎಂದನು. ಕೊರಡೇ ಪೆಟ್ಟಿನ ಹೆದರಿಕೆಯಿಂದ ಸುಬ್ಬಾಶಾಸ್ತ್ರಿ ತಣ್ಣಗಾಗಿಬಿಟ್ಟ. ವಿನಯನೇ ಅವನನ್ನು ಅವನ ಮನೆಯವರೆಗೂ ಹೋಗಿ ಬಿಟ್ಟು ಬಂದ. ಐವತ್ತು ರೂಪಾಯಿ ಸಾಲ ಹಾಗೆ ತೀರಿತ್ತು.

ವಿನಯನು ಮಾಡಿದ ಎರಡನೇ ಮಹಾಮೋಸವೇನೆಂದರೆ, ಆ ದಿನ ಮಧ್ಯಾಹ್ನದ ವೇಳೆಯಲ್ಲಿ ಅವನು ಅಂಗಡಿ ಭಂಡಾರಿಯ ಕಣ್ಣಿಗೆ ಬಿದ್ದ.

ಭಂಡಾರಿ ರೋಷದಿಂದ ಅವನ ಕೈ ಹಿಡಿದು "ನಿನ್ನನ್ನು ಹುಡುಕುವುದರಲ್ಲೇ ನನ್ನ ಚಪ್ಪಲಿ ಸವೆದು ಹೋಯಿತು. ಉಂ, ನನಗೆ ಕೊಡಬೇಕಾದ ಎಪ್ಪತ್ತು ರೂಪಾಯಿ ಕಕ್ಕು" ಎಂದನು.

"ಓಹ್! ಭಂಡಾರಿಯವರೇ, ನಾನೂ ಆ ಎಪ್ಪತ್ತು ರೂಪಾಯಿಗಾಗಿಯೇ ಹೊರಟಿದ್ದೇನೆ. ನಿಮ್ಮ ಹಣ ನಾನು ತಿಂದುಹಾಕಿದೆನೆಂದು ಮೂಡಿದಿರೇನು? ಅಲ್ಲಿ ನೋಡಿದಿರಾ? ಆ ಮನೆಯ ಜಗಲೀ ಮೇಲಿರುವ ಮುದುಕನ ಕೈಗೆ ಕೊಟ್ಟಿದ್ದೇನೆ. ಅವನಿಗೆ ಯಾರೋ ಎಪ್ಪತ್ತು ಕೊಡಲಿಕ್ಕಿದೆಯಂತೆ. ಬಂದಿದೆಯೋ ನೋಡೋಣ, ಬನ್ನಿ" ಎಂದ ವಿನಯ. ಈ ಮಾತು ಕೇಳಿ ಭಂಡಾರಿಯ ರೋಷ ತಗ್ಗಿತು.

ಇಬ್ಬರೂ ಅಲ್ಲಿಗೆ ಹೋದರು. ಜಗಲಿಯಮೇಲಿನ ಮಂಚದಲ್ಲಿ ಮುದುಕನೊಬ್ಬ ಒಳ್ಳೆಯ ನಿದ್ದೆಯಲ್ಲಿದ್ದ.



ವಿನಯ ಮನೆಯ ಬಾಗಿಲು ತಟ್ಟಿದ. ಯುವತಿಯೊಬ್ಬಳು ಬಾಗಿಲು ತೆರೆದಳು. ವಿನಯನು ಅವಳಿಗೆ ಮುದುಕನನ್ನು ತೋರಿಸಿ, "ಯಾವಾಗ ಕೇಳಿದರೂ ಇನ್ನೂ ಎಪ್ಪತ್ತು ಬರಲಿಲ್ಲ ಅಂತ ಹೇಳುತ್ತಾ ಇರ್ತಾರೆ. ನೀನು ಅವರ ಮೊಮ್ಮಗಳುತಾನೇ? ನಿನಗೇನಾದರೂ ಗೊತ್ತೇ?" ಎಂದ.

"ಎಪ್ಪತ್ತಲ್ಲ, ಎಂಬತ್ತು ಬಂತು. ಅಷ್ಟು ಬಂದರೂ ಬರೀ ಪಿಸುಣಾರಿ ಮುದುಕ. ಯಾರಿಗೂ ದಮ್ಮಡಿ ಕೊಡುವವರಲ್ಲ. ಏನು ಮಾಡೋದು ನಮ್ಮ ಕರ್ಮ" ಎಂದಳು ಆ ಯುವತಿ. ಅವಳು ಮುದುಕನ ವಯಸ್ಸು ಕುರಿತು ಹೇಳಿದ್ದಳು. ಹಣವನ್ನು ಕುರಿತೇ ಹೇಳುತ್ತಾಳೆಂದು ಭಂಡಾರಿ ಅಂದುಕೊಂಡ.

"ಅಂದರೆ ಬಂದ ಹಣವನ್ನೆಲ್ಲ ಭದ್ರವಾಗಿಟ್ಟಿದ್ದಾರೆ ಎಂದಾಯಿತು. ಎಂಬತ್ತು ಅಂದರೆ ಬಡ್ಡಿಯೂ ಆಯಿತು. ಏನಮ್ಮ, ನಾನು ಮತ್ತೆ ಬರುತ್ತೇನಂತ ಹೇಳು. ಅವರ ಹತ್ತಿರ ನಾನೆಲ್ಲ ಹೇಳಿದ್ದೇನೆ" ಎಂದು



ಮಾಡಯ್ಯ ಕುಂಭಕರ್ಣ. ಏಳೇಳು !'' ಎಂದ. ಭಂಡಾರಿ ಕೋಲಿನಿಂದ ಕುಟ್ಟಿದ್ದು ಮುದುಕನಿಗೆ ಯಾವ ಮರ್ಮಕ್ಕೆ ತಗಲಿತೋ ? ಅವನು ಭಯಂಕರವಾಗಿ ನರಳಿ ಪ್ರಾಣಬಿಟ್ಟ. "ಅಯ್ಯೋ! ಇವರಾರೋ ಅಜ್ಜನ್ನ ಕೊಂದ್ರೂ !'' ಎಂದು ಯುವತಿ ಚೀರಿದಳು. ಭಂಡಾರಿ ಪೇಚಿನಲ್ಲಿ ಬಿದ್ದು, ಕಡೆಗೆ ಮುದುಕನ ಉತ್ತರ ಕ್ರಿಯೆಗೆ ಮುನ್ನೂರು ರೂಪಾಯಿ ಮುದುಕನ ಮಗನ ಕೈಗೆ ಕೊಟ್ಟು, ನ್ಯಾಯಸ್ಥಾನ, ವಿಚಾರಣೆ, ಗಲ್ಲು ಮುಂತಾದ್ದು ಬಾರದಹಾಗೆ ಪಾರಾದ. ವಿನಯನ ಎಪ್ಪತ್ತು ರೂಪಾಯಿ ಸಾಲ ಹಾಗೆ ತೀರಿತ್ತು.

ಮೂರನೇದಾಗಿ ಅದೇ ದಿನ ಸಾಯಂಕಾಲ ವಿನಯ ಶೂರವರ್ಮನ ಕೈಗೆ ಸಿಕ್ಕಿಬಿದ್ದ. ಶೂರವರ್ಮ ಕ್ಷತ್ರಿಯ ವೀರ. ಆದರೆ ಸೊರಗಿಕೊಂಡು ಎಲುಬುಗಳ ಆಕೃತಿಯಂತೆ ಕಾಣುತ್ತಿದ್ದ. ಬೆನ್ನು ಗೂನು ಎದ್ದಿತ್ತು. ಆದುದರಿಂದ ಮದುವೆಯಾಗಿರಲಿಲ್ಲ. ಅವನು ಬಡ್ಡೀ ವ್ಯವಹಾರ ನಡೆಸಿಕೊಂಡಿದ್ದ. ವಿನಯ ಅವನಿಗೆ ನೂರೈವತ್ತು ರೂಪಾಯಿ ಸಾಲ ಕೊಡಬೇಕಾಗಿತ್ತು.

"ಅರರೇ ! ಶೂರವರ್ಮರೇ, ಎಲ್ಲರ ಸಾಲವನ್ನೂ ಕೊಟ್ಟು ತೀರಿಸಿ ಖಾಲಿಯಾದ ಮೇಲೆ ಭೇಟೀ ಕೊಟ್ಟಿರಲ್ಲಾ ?'' ಎಂದ ಅವನನ್ನು ನೋಡಿದ ಕೂಡಲೇ ವಿನಯ.

"ಮತ್ತೇನು ಮಾಡಲಿ? ಮನೆಗೆಲಸವೆಲ್ಲಾ ನಾನೇ ನೋಡಬೇಕಾಗಿದೆ. ನಿನ್ನನ್ನು ಹುಡುಕಿಕೊಂಡು ಬರಲು ಸಮಯವೇ ಸಿಗಲಿಲ್ಲ. ಇಂದು ನೀನಾಗಿ ಸಿಕ್ಕಿದಿ." ಎಂದ ಶೂರವರ್ಮ.

"ಅಲ್ಲ ಸ್ವಾಮಿ, ಇಷ್ಟೊಂದು ವ್ಯವಹಾರ ಕುಶಲರಾದ ನೀವು ಯಾಕೆ ಮದುವೆ ಮಾಡಿಕೊಳ್ಳಲಿಲ್ಲಾ?'' ಎಂದು ಕೇಳಿದ ವಿನಯ.

"ನನಗೆ ಯಾರು ಹುಡುಗಿ ಕೊಡುತ್ತಾರೆ ? '' ಎಂದ ಶೂರವರ್ಮ ನಿರುತ್ಸಾಹದಿಂದ. "ಹುಡುಗಿ ಕೊಡದಿರಲಿಕ್ಕೆ ನಿಮಗೇನು ಕಡಿಮೆಯಾಗಿದೆ?

ವಿನಯ ಅಲ್ಲಿಂದ ಹೋದಂತೆ ನಟಿಸಿ, ಹೂವಿನ ಪೊದರುಗಳ ಹಿಂದೆ ಅಡಗಿಕೊಂಡು, ಏನು ನಡೆಯುವುದೆಂದು ನೋಡುತ್ತ ಕುಳಿತ.

ಮುದುಕ ಏಳುವನೆಂದು ಭಂಡಾರಿ ಬಹಳಹೊತ್ತು ಕಾದು ಕಡೆಗೆ ಅವನನ್ನು ತಟ್ಟಿದ. ಬೆಕ್ಕೋ ನಾಯಿಯೋ ತನ್ನನ್ನು ಪರಚುವುದೆಂದು ತಿಳಿದು ಮುದುಕ "ಶ್ಶೂ ಶ್ಶೂ'' ಎಂದು ಕಾಲನ್ನು ಕುಣಿಸಿದ. ಅವನ ಕಾಲು ಭಂಡಾರಿಯ ಪಕ್ಕೆಗೆ ತಾಗಿ, ಭಂಡಾರಿ ಹಿಂದೆ ಮಗುಚಿ ಜಗಲಿಯಿಂದ ಕೆಳಗೆ ಬಿದ್ದ. ಮುದುಕ ಮಾತ್ರ ನಿದ್ದೆಯಿಂದ ಏಳಲೇ ಇಲ್ಲ.

ಕೆಳಗೆ ಬಿದ್ದ ಭಂಡಾರಿಗೆ ಬಹಳ ಕೋಪ ಬಂದಿತು. ಯುವತಿ ಬಾಗಿಲೆಡೆಯಿಂದ ಹಣಿಕಿ ನೋಡಿ ಒಳಗೆ ಹೋದಳು. ಭಂಡಾರಿ ಜಗಲಿಗೆ ಒರಗಿಸಿಟ್ಟಿದ್ದ ಮುದುಕನ ಊರುಗೋಲನ್ನು ತೆಗೆದು ಮುದುಕನ ಪಕ್ಕದಲ್ಲಿ ಕುಟ್ಟಿ, "ಎಂಥ ನಿದ್ದೆಯೋ ಮೊದ್ದು ಮುದುಕ? ನನ್ನ ಲೆಕ್ಕ ಮುಗಿಸಿ ಆಮೇಲೆ ನಿದ್ದೆ



ಆ ಮನೆಯಲ್ಲಿ ಪಾರ್ವತಮ್ಮ ಎಂಬ ಧನಿಕ ಹೆಂಗು ಸಿದ್ದಾಳಷ್ಟೆ? ಅವಳಿಗೆ ತಾರೆ ಎಂಬ ಮಗಳಿದ್ದಾಳೆ. ಸೌಂದರ್ಯದಲ್ಲಿ ಸಾಕ್ಷಾತ್ ತಾರೆಯೆ! ಆ ಹುಡುಗಿಯನ್ನು ನಿಮ್ಮಂಥ ವರನಿಗೇ ಕೊಡಬೇಕೆಂದು ಪಾರ್ವತಮ್ಮ ನೋಡುತ್ತಾಳೆ. ಹೋಗಿ ಕೇಳಿ. ಒಂದು ವಿಷಯ. ಆ ಹೆಂಗುಸಿಗೆ ಕೋತಿಗಳೆಂದರೆ ಬಹಳ ಮುದ್ದು ಭಕ್ತಿ. ಎಲ್ಲಾ ಕೋತಿಗಳೂ ಹನುಮಂತನೇ. ನಾಯಿಗಳೆಂದರೂ ಪ್ರಾಣ. ಯಾರನ್ನಾದರೂ ಕೋತಿಯ ಹಾಗಿರುವುದೆಂದರೆ ಅವಳು ಮೆಚ್ಚಿಕೊಳ್ಳುತ್ತಾಳೆ. ನಾಯಿಯನ್ನು ನೋಡಿದ ಹಾಗೆ ನೋಡುತ್ತೇನೆಂದರೆ ಬಹಳ ಸಂತೋಷಪಡುತ್ತಾಳೆ. ಈ ವಿಷಯ ನೆನಪಿಟ್ಟುಕೊಳ್ಳಿ" ಎಂದ ವಿನಯ.

ತನಗೆ ಹೆಣ್ಣು ಕೊಡುವವರೊಬ್ಬರು ಇದ್ದಾರೆಂದು ತಿಳಿದಕೂಡಲೇ ಸಂತೋಷದಿಂದ ಉಬ್ಬಿದ ಶೂರವರ್ಮ, ಅದೇ ಹುರುಪಿನಿಂದ ನೆಟ್ಟಗೆ ಪಾರ್ವತಮ್ಮನ ಮನೆಗೆ ಹೋದ. ಅವನು ಬಾಗಿಲು ತಟ್ಟಿದಮೇಲೆ ಪಾರ್ವತಮ್ಮ ಬಾಗಿಲು ತೆರೆದು ಅವನನ್ನು ನೋಡಿ, "ಯಾರು? ಏನು ಬೇಕು?" ಎಂದು ಕೇಳಿದಳು.

"ನಿಮ್ಮ ಮಗಳು ತಾರೇನ ಮದುವೆಯಾಗಲು ಇಷ್ಟಪಡುತ್ತೇನೆ. ಸ್ಥಿರ ಚರ ಸೊತ್ತು ಮುಂತಾದ ವಿಷಯದಲ್ಲಿ ನಿಮ್ಮ ಅಳಿಯನಾಗಬಲ್ಲ ಯೋಗ್ಯತೆ ನನಗಿದೆ." ಎಂದ ಶೂರವರ್ಮ.

"ಓ, ಬಂದೆ" ಎನ್ನುತ್ತಾ, ಪಾರ್ವತಮ್ಮ ಒಳಗೆ ಹೋಗಿ ವಾಂತಿ ಮಾಡಿ, ದೋಸೆಯ ಸಟ್ಟುಗವನ್ನು ಒಲೆಯ ಕೆಂಡದಲ್ಲಿ ತೂರಿಸಿಟ್ಟು ಹೊರಗೆ ಬಂದು, ಶೂರವರ್ಮನನ್ನು ಕೂತುಕೊಳ್ಳಲು ಹೇಳಿ, "ಹುಂ, ನಮ್ಮ ತಾರೆ ಅದೃಷ್ಟವಂತೆ. ಅವಳನ್ನು ಯಾವಾಗ ನೋಡಿದಿರಿ? ಅವಳನ್ನು ಕುರಿತು ನಿಮ್ಮ ಅಭಿಪ್ರಾಯ ಏನು?" ಎಂದಳು.

ಶೂರವರ್ಮ ಹಲ್ಲು ತೋರಿಸುತ್ತ, "ನೋಡಿದ್ದೇನೆ ಬಿಡಿ. ಕೋತಿಯ ಹಾಗಿರುತ್ತಾಳೆ. ತಾರೆಗೇನು ಕಡಿಮೆ?" ಎಂದ. "ಓಹೋ! ಮೊದಲೇ ನೋಡಿದ್ದೀಯಾ? ಸರಿಯಪ್ಪ. ಮದುವೆಯಾದ ಮೇಲೆ ನಾನು ನಿಮ್ಮ ಮನೆಗೆ ಬಂದರೆ ನನ್ನನ್ನು ಹೇಗೆ ನೋಡಿಕೊಳ್ಳುವಿರಿ?" ಎಂದು ಕೇಳಿದಳು.

"ನಾಯಿಯನ್ನು ನೋಡಿಕೊಳ್ಳುವ ಹಾಗೆ ನೋಡುತ್ತೇನೆ. ನಿಮಗೆ ಮಾತ್ರ ಕಡಿಮೆ ಮಾಡುವೆನೋ?" ಎಂದ ಶೂರವರ್ಮ.

ಪಾರ್ವತಮ್ಮ ಎದ್ದು ಒಳಗೆ ಹೋಗಿ ಕೆಂಪಗೆ ಕಾದ ದೋಸೇ ಸಟ್ಟುಗವನ್ನು ತಂದು ಶೂರವರ್ಮನ ಗೂನುಬೆನ್ನಿಗೆ ಕಾಯಿಸಿಟ್ಟು "ಹೋಗಾಚೆ. ನಿನ್ನ ಮುಖಕ್ಕೆ ಮದುವೆಯೊಂದು ಕೇಡು" ಎಂದು ಬಯ್ದು ಹೊರಗೆ ದೂಡಿ ಬಾಗಿಲು ಹಾಕಿಕೊಂಡಳು.

ಶೂರವರ್ಮ ತನ್ನನ್ನು ಯಾರೂ ನೋಡದಂತೆ ಕತ್ತಲೆಯಲ್ಲಿ ತಗ್ಗಿಬಗ್ಗಿ ಹೋಗುತ್ತಿದ್ದಾಗ, ವಿನಯ ಅವನಿದಿರು ಬಂದು, "ಹಣ ತೆಗೆದುಕೊಳ್ಳದೆ ಹೋಗುವಿರಲ್ಲಾ? ಪಾರ್ವತಮ್ಮ, ಓಹ್, ಬೆನ್ನಿಗೇನೋ

ಗುರುತು ಮಾಡಿದಂತಿದೆ. ಏಕೆ? ಏನಾಯಿತು? ಸಾವಕಾಶವಾಗಿ ಹೇಳಿರಲ್ಲ?" ಎಂದ.

"ಸುಮ್ಮನಿರಯ್ಯ. ಇದೆಲ್ಲವೂ ನಿನ್ನಿಂದಲೇ ಆಯಿತು. ನೀನು ನನಗೆ ಕೊಡುವ ಸಾಲ ಬಿಟ್ಟುಬಿಟ್ಟೆ. ಈ ಸುದ್ದಿ ಮಾತ್ರ ಯಾರಿಗೂ ಹೇಳಬೇಡ. ಮಾನ ಹೋಗುತ್ತೆ" ಎಂದು ಹೇಳಿ ಶೂರವರ್ಮ ವಿನಯನಿಗೇ ಇಪ್ಪತ್ತೈದು ರೂಪಾಯಿ ಭಕ್ಷೀಸು ಕೊಟ್ಟು ಹೋಗಿಬಿಟ್ಟ.

ಹಿಂದೊಮ್ಮೆ ವಿನಯ ಕೂಡಾ ಪಾರ್ವತಮ್ಮನ ಕೈಯಿಂದ ಕಾಯಿಸಿಕೊಂಡವನೇ. ಅದಕ್ಕೇ ಹೀಗೊಂದು ಪರಿಹಾರ ಮಾಡಿಕೊಂಡು ತನ್ನ ಬೆನ್ನಿನಲ್ಲಿರುವ ಗಾಯವನ್ನು ತಡವುತ್ತಾ ಊರು ಬಿಟ್ಟು ಹೀಗೆ ವಿನಯ ಬಂದು ಕಳ್ಳನ ಕೈಗೆ ಸಿಕ್ಕಿಬಿದ್ದಿದ್ದ.

ವಿನಯನು ಹೇಳಿದ ಈ ಬಗೆಯ ಘನವಾದ ಮೋಸಕಾರ್ಯಗಳನ್ನು ಕೇಳಿ ಕಳ್ಳ ನಕ್ಕು, "ನಿನ್ನಂಥ ಮೂರ್ಖ ಯಾರೂ ಇರಲಿಕ್ಕಿಲ್ಲ. ಪರಿಸ್ಥಿತಿಗಳು ನಿನಗೆ ಅನುಕೂಲವಾಗಿದ್ದುವೇ ಹೊರತು, ನಿನ್ನ ಬುದ್ಧಿವಂತಿಕೆ ಚಾತುರ್ಯಗಳೇನೂ ಇದರಲ್ಲಿಲ್ಲ. ಸುಬ್ಬಾಶಾಸ್ತ್ರಿಯೊಬ್ಬ ಅರೆಹುಚ್ಚ. ನಾನಾಗಿರುತ್ತಿದ್ದರೆ ನಿನ್ನನ್ನು ಎಡಗೈಯಿಂದ ಎತ್ತಿ ಮನೆಯ ಮಾಳಿಗೆಗೆ ಬಿಸುಡುತ್ತಿದ್ದೆ. ಭಂಡಾರಿಯ ವಿಷಯದಲ್ಲಿ ಮುದುಕ ಆಕಸ್ಮಾತ್ತಾಗಿ ಸತ್ತುದರಿಂದಲೇ ನಿನಗೆ ಅನುಕೂಲವಾಯಿತು. ಶೂರವರ್ಮ ಪಾರ್ವತಮ್ಮನಿಂದ ಅವಮಾನಿತನಾಗದಿದ್ದರೆ ನಿನ್ನ ಮೂಗು ಒತ್ತಿ ತನ್ನ ಸಾಲ ವಸೂಲು ಮಾಡಿಕೊಳ್ಳುತ್ತಿದ್ದ. ನನ್ನ ಜತೆಗಾರನಾಗಿರಲಿಕ್ಕೆ ನಿನಗೆ ಯಾವ ಯೋಗ್ಯತೆಯೂ ಇಲ್ಲ." ಎಂದ.

ಕಳ್ಳ ಹೊರಟುಹೋದ ಮೇಲೆ ವಿನಯ ಆ ಮರದ ಕೆಳಗೇ ಕುಳಿತುಕೊಂಡು ಆಲೋಚನೆ ಮಾಡತೊಡಗಿದ. ಅವನಿಗೆ ಸಾಲಮಾಡಿ ಬದುಕಲು ಭಯವಾಯಿತು. ಅದೂ ಅಲ್ಲದೆ ತಿಳಿದವರಾರೂ ಸಾಲ ಕೊಡಲಾರರು. ತಿಳಿಯದವರು ಅಸಲೇ ಕೊಡರು. ಕಳ್ಳತನಕ್ಕೂ ತಾನು ನಿರುಪಯೋಗಿಯಾದ. ಆಸ್ತಿಯೂ ಇಲ್ಲ. ಹಾಗಾದರೆ ಬದುಕುವ ದಾರಿ ಹೇಗೆ? ಸಾಯಲಿಕ್ಕಂತೂ ಇಷ್ಟವಿಲ್ಲ.

ಬೆಳಗಾಗುವಾಗ ಜನರು ಗುಂಪುಗುಂಪಾಗಿ ಗದ್ದೆಯಲ್ಲಿ ಕೆಲಸ ಮಾಡಲು ಹೋಗುತ್ತಿದ್ದರು. ಅವರನ್ನು ನೋಡಿ ವಿನಯನು ಗಬಕ್ಕನೆದ್ದು "ನಾನೂ ನಿಮ್ಮೊಂದಿಗೆ ಯಾವ ಕೆಲಸಕ್ಕಾದರೂ ಬರುತ್ತೇನೆ. ಆಗದೆ?" ಎಂದು ಕೇಳಿದ.

"ಬಾ, ಅದಕ್ಕೇನು? ಕಷ್ಟಪಟ್ಟರೆ ಕೂಲಿ. ಯಾರ ಹಂಗು?" ಎಂದರು ಅವರು. ಅಂದಿನಿಂದ ವಿನಯನಿಗೆ ಬದುಕುವ ದಾರಿಯೊಂದು ಸಿಕ್ಕಿತು. ಕಷ್ಟಾಳುಗಳ ಸ್ನೇಹ ಸಂಪರ್ಕಗಳಿಂದ, ಚೆನ್ನಾಗಿ ದುಡಿದು ಉಣ್ಣಲು ಕಲಿತು ಸುಖವಾಗಿದ್ದ.



# ತೀರ್ಪು

ಒಬ್ಬ ಗುರುವಿನ ಬಳಿಯಲ್ಲಿ ರಾಮನೆಂಬ ಶಿಷ್ಯನು ನ್ಯಾಯಶಾಸ್ತ್ರ ಓದಿ ಮುಗಿಸಿದ.

ಅವನು ಹೊರಟು ಹೋಗುವಾಗ ಗುರುಗಳು ಅವನ ಹತ್ತಿರ ಸಾವಿರ ವರಹಗಳನ್ನು ಗುರುದಕ್ಷಿಣೆಯಾಗಿ ಕೊಡಬೇಕೆಂದು ಕೇಳಿದರು.

“ಈಗ ನನ್ನ ಹತ್ತಿರ ಏನೂ ಇಲ್ಲ. ನಾನು ಮೊದಲನೇ ವ್ಯಾಜ್ಯದಲ್ಲಿ ಗೆದ್ದಾಗ ನಿಮಗೆ ಸಾವಿರ ವರಹ ಕೊಡುತ್ತೇನೆ.” ಎಂದ ರಾಮ.

ಗುರುಗಳು ಅದಕ್ಕೆ ಒಪ್ಪಿದರು.

ಅವನು ಹೊರಟುಹೋದ ಕೂಡಲೇ ಗುರುಗಳು ಅವನ ಮೇಲೆ ಸಾವಿರ ವರಹ ಕೊಡಬೇಕೆಂದು ವ್ಯಾಜ್ಯ ಹೂಡಿದರು. ಆಗ ನ್ಯಾಯಾಧಿಕಾರಿಗಳು ರಾಮನನ್ನು ನೋಡಿ, “ಅದಕ್ಕೆ ಏನು ಹೇಳುವೆ?” ಎಂದು ಕೇಳಿದರು.

“ಗುರುಗಳು ನನ್ನ ಹತ್ತಿರ ಸಾವಿರ ವರಹ ಗುರುದಕ್ಷಿಣೆ ಕೇಳಿರುವುದು ನಿಜ. ನಾನು ಮೊದಲನೇ ವ್ಯಾಜ್ಯದಲ್ಲಿ ಗೆದ್ದರೆ ಕೊಡುವೆನೆಂದುದೂ ನಿಜ. ಈಗ ನೀವು ನನ್ನಿಂದ ಅವರಿಗೆ ಸಾವಿರ ವರಹ ಕೊಡಿಸಿದರೆ ಮೊದಲನೇ ವ್ಯಾಜ್ಯದಲ್ಲಿ ನಾನು ಸೋತವನಾಗುತ್ತೇನೆ. ಆದುದರಿಂದ ಅವರಿಗೆ ಗುರುದಕ್ಷಿಣೆ ಕೊಡಬೇಕಾಗಿಲ್ಲ. ಅವರು ಈ ವ್ಯಾಜ್ಯದಲ್ಲಿ ಸೋತರೆ ಅವರು ಕೇಳುವ ಮೊತ್ತವನ್ನು ನೀವೇ ನಿರಾಕರಿಸಿದಂತಾಗುತ್ತದಷ್ಟೆ?” ಎಂದನು.

ನ್ಯಾಯಾಧಿಕಾರಿಗಳಿಗೆ ಏನೂ ತೋರದೆ ವಿಚಾರಣೆಯನ್ನು ನೂರು ವರ್ಷ ಮುಂದುವರಿಸಿಟ್ಟರು.





# ಸೊಸೆಯಲ್ಲಿ ವಿಚಿತ್ರ

ಒಂದು ಊರಿನಲ್ಲಿ ಒಬ್ಬ ಲೋಭಿಗೆ ಜನಕನೆಂದು ಹೆಸರು. ಅವನು ಧನರಾಶಿಯ ಮೇಲೆ ಮಲಗಿಕೊಳ್ಳು ವಷ್ಟು ಧನಿಕನಾದರೂ ತುಂಬ ಅಲ್ಪಬುದ್ಧಿಯವನು. ಅವನಿಗೆ ಈ ಪ್ರಪಂಚದಲ್ಲಿ ಹಣಕ್ಕಿಂತ ಮಹತ್ವ ವಾದುದು ಯಾವುದೂ ಇರಲಿಲ್ಲ. ಹಣಕ್ಕಾಗಿ ಅವನು ಏನು ಮಾಡಲಿಕ್ಕೂ ತಯಾರಾಗಿರುವಷ್ಟರಮಟ್ಟಿಗೆ ನೀಚಗುಣದವನು.

ಜನಕನ ಮಗ ಶೀತಳಮತಿ ಎಂಬವನು ಎಲ್ಲಾ ವಿಧದಲ್ಲಿಯೂ ತಂದೆಗೆ ವಿರುದ್ಧ ಗುಣದವನು. ಅವನು ತನ್ನ ಊರಿಗೆ ಐವತ್ತು ಮೈಲು ದೂರದಲ್ಲಿದ್ದ ಒಂದು ಪಟ್ಟಣದಲ್ಲಿ ಒಬ್ಬ ವರ್ತಕನ ಹತ್ತಿರ ಕೆಲಸ ಮಾಡುತ್ತಿದ್ದ. ಆದುದರಿಂದ ಅವನು ಮನೆಯಲ್ಲಿರು ವುದು ಬಹಳ ಅಪರೂಪ. ಏನಾದರೂ ವಿಶೇಷವಿದ್ದರೆ ಮನೆಯಲ್ಲಿದ್ದು ಹೋಗಿಬಿಡುವನು.

ಹೀಗಿರಲು ಜನಕನ ಹೆಂಡತಿ ಕಾಯಿಲೆಬಿದ್ದು ಸ್ವಲ್ಪ ನರಳಿ ತೀರಿಹೋದಳು. ಮನೆಯಲ್ಲಿ ಒಳಗೆಲಸ ಮಾಡಿ, ಒಂದಿಷ್ಟು ಬೇಯಿಸಿಹಾಕಲು ಮನೆಯವಳಾಗಿ ಯಾರೂ ಇಲ್ಲದೆ ಎರಡು ವರ್ಷ ಕಳೆದಮೇಲೆ, ಜನಕನು ಸುಲತ ಎಂಬ ಹುಡುಗಿಯನ್ನು ನೋಡಿ ಶೀತಳಮತಿಗೆ ಮದುವೆ ಮಾಡಿದನು. ಸುಲತಳ ತಂದೆ ಐಶ್ವರ್ಯವಂತನಾದ ದೊಡ್ಡ ಆಸ್ತಿವಂತನಾಗಿದ್ದ. ಅವನು ಜನಕನು ಕೇಳಿದಂತೆ ಶೀತಳಮತಿಗೆ ದೊಡ್ಡ ಮೊತ್ತದ ವರದಕ್ಷಿಣೆ ಮತ್ತು ಕಾಣಿಕೆ ಕಟ್ಟಳೆಗಳನ್ನೆಲ್ಲ ಭರ್ಜರಿಯಾಗಿಯೇ ಕೊಟ್ಟಿದ್ದ.

ಸುಲತ ಬುದ್ಧಿವಂತೆಯಾದ ನಾಜೂಕಿನ ಹುಡುಗಿ. ಮದುವೆಗೆ ಮುಂಚೆ ಅವಳು ಮನೆಯಲ್ಲೇ ಇದ್ದು ತನ್ನ ಚಿಕ್ಕಪ್ಪನ ಹತ್ತಿರ ಸ್ವಲ್ಪಮಟ್ಟಿಗೆ ಓದುಬರೆಹ ಕಲಿತಿದ್ದಳು. ಅವಳ ಚಿಕ್ಕಪ್ಪನ ಹೆಸರು ದೇವದತ್ತ. ಅವನು ಶಾಲೆಯಲ್ಲಿ ಮಾಸ್ತರನಾಗಿದ್ದು, ಪ್ರತ್ಯೇಕವಾಗಿ ಇಂದ್ರಜಾಲ ವಿದ್ಯೆಯನ್ನೂ ಬಲ್ಲವನು. ಅವನಿಗೆ ಸುಲತಳ ಮೇಲೆ ಅತ್ಯಂತ ಮಮತೆಯಿದ್ದಿತು.

ಮದುವೆಯಾಗಿ ಗಂಡನ ಮನೆಗೆ ಬಂದಮೇಲೆ ಸುಲತ ಆ ಮನೆಯ ಕೆಲಸದವಳೇ ಆಗಿಬಿಟ್ಟಳು. ಅದು ಅವಳಿಗೆ ಕೇವಲ ಮಾವನ ಮನೆಯಾಯಿತೇ ಹೊರತು ಗಂಡನ ಮನೆಯಾಗಲಿಲ್ಲ. ಲೋಭಿಯಾದ ಜನಕನು ಯಾವ ಕೆಲಸಕ್ಕೂ ಆಳನ್ನಿಟ್ಟುಕೊಳ್ಳದೆ, ಮನೆಯ ಎಲ್ಲಾ ಕೆಲಸಗಳನ್ನೂ ಸುಲತಳ ಮೇಲೆಯೇ ಒರಗಿಸಿದನು. ಅವಳು ಕೂಡಾ ಏನೂ ಗೊಣಗದೆ

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು

ಅತ್ಯಂತ ಸಹನೆಯಿಂದ ಮನೆಯ ಚಾಕರಿಯನ್ನು ಮಾಡುತ್ತಿದ್ದಳು. ಅವಳಿಗೆ ಗಂಡನೊಂದಿಗೆ ಇರುವ ಅವಕಾಶ ಕೂಡಾ ಇರಲಿಲ್ಲ.

ಶೀತಳಮತಿ ಯಾವಾಗಾದರೊಂದು ಸಾರಿ ಮನೆಗೆ ಬಂದರೆ ಎರಡು ದಿನ ವಿದ್ದರೂ ಇಲ್ಲದವನಂತೆಯೇ ಹೊರಟುಹೋಗಿಬಿಡುತ್ತಿದ್ದ. ಈ ಅಲ್ಪಕಾಲದಲ್ಲಿ ಸುಲತ ಗಂಡನ ಕಿವಿಗೆ ದೂರು ಧೂಳುಗಳನ್ನು ಹಾಕುವವಳಲ್ಲ. ಅಂತೂ ಗಂಡ ಬಂದಾಗ ಅವಳಿಗಾಗುವ ಒಂದು ಸಂತೋಷದ ಹೊರತು, ಉಳಿದ ದಿನಗಳೆಲ್ಲ ಅವಳಿಗೆ ಬಹಳ ಭಾರವಾಗಿದ್ದುವು.

ಜನಕನು ಈ ಸೊಸೆಯನ್ನು ತೌರುಮನೆಗೆ ಕಳಿಸುವುದೂ ಇಲ್ಲ. ಅವಳಿಲ್ಲದಿದ್ದರೆ ಅವನೇ ಅಡಿಗೆ ಮಾಡಬೇಕಷ್ಟೆ? ಎರಡು ವರ್ಷಗಳಲ್ಲಿ ಸುಲತ ಒಂದುಸಾರಿ ಮಾತ್ರ ಯಾವುದಕ್ಕೋ ತನ್ನ ಗಂಡನೊಂದಿಗೆ ತೌರು ಮನೆಗೆ ಹೋಗಿ ಬಂದಿದ್ದಳು.

ಹಾಗಿರಲು ಜನಕನಿಗೆ ಇನ್ನೊಂದು ಆಲೋಚನೆ ಸುಳಿಯತೊಡಗಿತು. ಮದುವೆಯಾಗಿ ಎರಡು ವರ್ಷಗಳಾದರೂ ಅವಳ ಹೊಟ್ಟೆಯಲ್ಲಿ ಏನೂ ಹುಟ್ಟುವ ಲಕ್ಷಣ ಕಾಣುವುದಿಲ್ಲವಲ್ಲ ಎಂದು ಗೊಣಗತೊಡಗಿದ. ಒಂದೆರಡುಸಾರಿ ಮಗನೊಂದಿಗೆ "ಈ ಹೆಂಡತೀನ ಬಿಟ್ಟು ಇನ್ನೊಬ್ಬಳನ್ನು ಮಾಡಿಕೋ. ಈ ಊರಿನ ದೊಡ್ಡ ಮನುಷ್ಯ ಗಂಗಾಧರನ ಮಗಳು ಸುಲೋಚನ ಲಕ್ಷಣವಾಗಿದ್ದಾಳೆ. ಅವಳನ್ನು ಮಾಡಿಕೊಂಡರೆ ಗಂಗಾಧರ ಸ್ತ್ರೀಧನವಾಗಿ ಐದು ಎಕರೆ ಹೊಲವನ್ನೂ ಸಾವಿರ ರೂಪಾಯಿ ನಗದೂ ಕೊಡುತ್ತಾನಂತೆ. ಇದು ಒಳ್ಳೆಯ ಸಂದರ್ಭ" ಎಂದ.

"ಸುಲತ ಏನು ತಪ್ಪು ಮಾಡಿದಳೆಂದು ಬಿಟ್ಟು ಬಿಡಲಿ? ಸುಲೋಚನ ಮಾತ್ರ ಮಕ್ಕಳನ್ನು ಹಡೆಯುವಳೆಂಬ ನಂಬುಗೆ ಏನು? ನನಗೇ ಮಕ್ಕಳ ಗೀಟು ಇಲ್ಲವೋ ಏನೋ? ಬ್ರಹ್ಮ ಬರೆದರೆತಾನೇ ಎಲ್ಲಾ ಹುಟ್ಟುವುದು?" ಎಂದ ಶೀತಳಮತಿ.

ಆದರೂ ಜನಕನ ಆಶೆ ಬಿಡಲಿಲ್ಲ. ಮುಖ್ಯವಾಗಿ ಮಗನಿಗೆ ಎರಡನೇ ಮದುವೆ ಮಾಡಬೇಕೆನ್ನುವುದು ಅವನಿಗಿರುವ ಲೋಭದ ಕಾರಣದಿಂದಲೇ.





ಗಂಗಾಧರನು ಹೊಲಗಳನ್ನೂ, ನಗದನ್ನೂ ಕೊಡುವೆ ನೆನ್ನಲು ಕಾರಣವಿದ್ದಿತು. ಅವನ ಮಗಳು ಸುಲೋಚನ ಸುರೂಪಿಣಿಯಲ್ಲ, ಅವಳ ಒಂದು ಕಣ್ಣಿನಲ್ಲಿ ಹೂ ಬಂದುದೊಂದು ಲೋಪವಾಗಿತ್ತು.

ಸುಲತ ತೌರುಮನೆಗೆ ಹೋಗದಿದ್ದರೂ, ತಿಂಗಳಿಗೊಂದು ಸಾರಿಯಾದರೂ ಅವಳ ತೌರಿನಿಂದ ಯಾರೋ ಒಬ್ಬರು ಅವಳನ್ನು ನೋಡಲು ಬರುತ್ತಿದ್ದರು. ಬರುವವರು ತರಕಾರಿ, ಮಿಠಾಯಿ, ಬಗೆ ಬಗೆಯ ಹಣ್ಣು ಮೊದಲಾದುವನ್ನು ತರುತ್ತಿದ್ದರು. ಆದುದರಿಂದ ಅವರು ಬರುವುದರಲ್ಲಿ ಜನಕನಿಗೇನೂ ಅಭ್ಯಂತರವಿರಲಿಲ್ಲ. ಹಾಗೆ ಬರುವವರ ಮೂಲಕ ಸುಲತಳ ತಾಯಿ, ಮಗಳನ್ನು ನೋಡಬೇಕೆಂದಿದೆ. ಒಂದುಸಾರಿ ಬರಲಿ—ಎಂಬ ತನ್ನ ಕೋರಿಕೆಯನ್ನು ಹೇಳಿ ಕಳುಹಿಸುತ್ತಿದ್ದಳು. ಆದರೆ ಜನಕನು ತನ್ನ ಸೊಸೆಯನ್ನು ಕಳುಹಿಸುತ್ತಿರಲಿಲ್ಲ. ತನ್ನ ಮಾತು ನಡೆಯದೆಂದು ಗೊತ್ತಿರುವ ಸುಲತ ಸುಮ್ಮನಿದ್ದಳು.

ಒಂದುದಿನ ಸುಲತಳ ಚಿಕ್ಕಪ್ಪ ದೇವದತ್ತನು ಸುಲತಳನ್ನು ನೋಡಲು ಬಂದ. ಆಗ ಅವನು "ನಿನಗಾಗಿ ಕೊರಗುತ್ತ ನಿನ್ನ ತಾಯಿ ಹಾಸಿಗೆ ಹಿಡಿದಿದ್ದಾಳೆ. ನಿನ್ನನ್ನು ನೋಡಿದ ಹೊರತು ಅವಳಿಗೆ ಸುಖವಾಗದೆಂದು ವೈದ್ಯರು ಹೇಳುತ್ತಾರೆ. ನೀನೊಮ್ಮೆ ಹೊರಡಲೇ ಬೇಕು" ಎಂದ. ಈ ಕೋರಿಕೆಯನ್ನು ಜನಕನ ಮುಂದೆಯೂ ಇಟ್ಟ.

ಸುಲತಳನ್ನು ಬಿಟ್ಟುಬಿಡಲು ಇದು ಒಳ್ಳೆಯ ಅವಕಾಶವೆಂದು ಜನಕನಿಗೆ ತೋರಿತು. ಅವನು ದೇವದತ್ತನೊಂದಿಗೆ, "ನಾನು ಒಂದು ಒಳ್ಳೇ ದಿನ ನೋಡಿ ಸುಲತಳನ್ನು ಕಳುಹಿಸಿಕೊಡುತ್ತೇನೆ. ನೀವು ಹೋಗಿ" ಎಂದ. ದೇವದತ್ತ ಹೊರಟುಹೋದ.

ಜನಕನು ದೀರ್ಘಾಲೋಚನೆ ಮಾಡಿ ಒಂದು ಕೆಟ್ಟ ಉಪಾಯಕ್ಕೆ ತಲೆಹಾಕಿದನು. ತನ್ನ ಯೋಚನೆಯನ್ನು ಕುರಿತು ಅವನು ಗಂಗಾಧರನೊಂದಿಗೆ ಹೇಳಲು, ಇದು ದಿವ್ಯವಾದ ಮಾರ್ಗವೆಂದು ಅವನೂ ಒಪ್ಪಿದ.

ಜನಕನು ಮನೆಗೆ ಬಂದು ಸುಲತಳೊಂದಿಗೆ, "ಅಮ್ಮಾ, ನಿನ್ನನ್ನು ನಾಳೆ ತೌರುಮನೆಗೆ ಕಳುಹಿಸಬೇಕೆಂದಿದ್ದೇನೆ. ಆದರೆ ಒಂದು ಷರತ್ತಿದೆ. ಅದಕ್ಕೆ ನೀನು ಒಪ್ಪಿಕೊಳ್ಳಬೇಕು" ಎಂದನು.

"ಹೇಳಿರಿ. ಒಪ್ಪಿಕೊಳ್ಳುತ್ತೇನೆ ಮಾವಯ್ಯ" ಎಂದಳು ಸುಲತ. ಆಗ ಜನಕನು ಒಂದು ಸೀಸೆಯನ್ನು ಅವಳ ಕೈಗೆ ಕೊಡುತ್ತ, "ಈ ಸೀಸೆಯನ್ನು ತೆಗೆದುಕೋ. ನೀನು ಮತ್ತೆ ಇಲ್ಲಿಗೆ ಬರುವಾಗ ಈ ಸೀಸೆಯೊಳಗೆ ಏನಾದರೂ ಒಂದು ವಿಚಿತ್ರವನ್ನು ತರಬೇಕು. ಅದನ್ನು ನೋಡಿದ ಕೂಡಲೇ ಎಲ್ಲರಿಗೂ ಅದ್ಭುತವಾಗಿ ಕಾಣಬೇಕು. ಹಾಗೆ ಮಾಡಲಾಗದೆ ಹೋದರೆ ನೀನು ಹಿಂದಿರುಗಿ ಬರಲೇ ಬಾರದು. ಶೀತಳಮತಿಗೆ ಇನ್ನೊಂದು ಮದುವೆ ಮಾಡುತ್ತೇನೆ. ಏನನ್ನುವಿ?" ಎಂದನು. ಸುಲತ ಮಾವಯ್ಯ ಕೊಟ್ಟ ಸೀಸೆಯನ್ನು ಕೈಯಲ್ಲಿ ಹಿಡಿದುಕೊಂಡು

ನೋಡಿದಳು. ಚಿಕ್ಕ ಬಾಯಿಯಿರುವ ಗುಂಡಗಿನ ಸೀಸೆಯದು. ಅವಳು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಏನೋ ಆಲೋಚಿಸಿ, "ಪರೀಕ್ಷೆ ಅರ್ಥವಾಯಿತು ಮಾವಯ್ಯ" ಎಂದಳು.

"ಈ ಷರತ್ತಿಗೆ ನೀನು ಒಪ್ಪಿರುವಿಯಷ್ಟೆ ?" ಎಂದು ಜನಕನು ಕೇಳಲು, "ಒಪ್ಪಿಕೊಂಡಿದ್ದೇನೆ. ಆದರೆ ಮಾವಯ್ಯ, ನಾನು ಕೂಡಾ ಒಂದು ಸಣ್ಣ ಷರತ್ತು ಹೇಳೋಣವೆಂದು ಮಾಡಿದ್ದೇನೆ. ಷರತ್ತು ಅಂದಮೇಲೆ ಇಬ್ಬರಿಗೂ ಸರಿಯಾಗಿರಬೇಕಲ್ಲವೇ ?" ಎಂದಳು ಸುಲತ.

"ಓಹೋ ! ಏನು ನಿನ್ನ ಷರತ್ತು ?" ಎಂದು ಜನಕನು ಪ್ರಶ್ನೆ ಮಾಡಿದ.

"ನಾನು ನಿಮ್ಮ ಷರತ್ತನ್ನು ನೆರವೇರಿಸಿದರೆ ನೀವು ನನ್ನನ್ನು ಇಲ್ಲಿಯೇ ಇರಬೇಕೆಂದು ನಿರ್ಬಂಧಿಸಬಾರದು. ನನ್ನನ್ನು ನನ್ನವರೊಂದಿಗೆ ಪಟ್ಟಣದಲ್ಲಿರಲು ಅನುಮತಿ ಕೊಡಬೇಕು. ಅದಕ್ಕೆ ಒಪ್ಪುವಿರಾ ?" ಎಂದು ಸುಲತ ಕೇಳಿದಳು. ಜನಕನು ತೀವ್ರವಾಗಿ ಆಲೋಚನೆ ಮಾಡಿ ಕಡೆಗೆ ಸರಿ ಎಂದು ಒಪ್ಪಿದ. ಸುಲತ ತನ್ನ ಮಾವಯ್ಯನನ್ನು ದೇವರ ಕೋಣೆಗೆ ಕರೆದುಕೊಂಡು ಹೋಗಿ, ತಾನು ಮಾವಯ್ಯನ ಷರತ್ತಿಗೆ ಬದ್ಧಳಾಗುವೆನೆಂದು ಪ್ರಮಾಣ ಮಾಡಿ, ಮಾವಯ್ಯನಿಂದಲೂ ಹಾಗೇ ಪ್ರಮಾಣ ಮಾಡಿಸಿದಳು. ಅನಂತರ ಮಾವಯ್ಯ ಕೊಟ್ಟ ಸೀಸೆಯೊಂದಿಗೆ ತೌರುಮನೆಗೆ ಹೊರಟಳು.

ಅಲ್ಲಿ ಅವಳ ಕೈಯಲ್ಲಿರುವ ಸೀಸೆಯನ್ನು ನೋಡಿ, ತಂದೆಯೂ . ತಾಯಿಯೂ "ಇದೇನು ಸೀಸೆಯಮ್ಮಾ ?" ಎಂದು ಕೇಳಿದರು.

"ಏಚ್ಚೀದನೆ. ಮಾವಯ್ಯ ನನ್ನನ್ನು ಹೊರಗೆ ದೂಡಿಬಿಟ್ಟಿರು." ಎಂದು ಸುಲತ ಎಲ್ಲಾ ಸಮಾಚಾರವನ್ನೂ ಹೇಳಿದಳು. ಚಿಕ್ಕಪ್ಪ ದೇವದತ್ತನೂ ಅಲ್ಲಿಯೇ ಇದ್ದು ಅವಳು ಹೇಳಿದುದನ್ನೆಲ್ಲಾ ಕೇಳಿ, ಮುಗುಳು ನಕ್ಕು, "ಇಷ್ಟು ಸಣ್ಣ ವಿಷಯಕ್ಕೆ ನೀನೇನು ಹೆದರಬೇಕಾಗಿಲ್ಲ. ನಾನು ಕಲಿತ ಇಂದ್ರಜಾಲ ನಿನ್ನ ಕೆಲಸಕ್ಕೆ ಉಪಯೋಗಬೀಳುವಂತಾಯಿತು. ಒಂದು ವಾರ ಇಲ್ಲಿ



ನಿಶ್ಚಿಂತಳಾಗಿರು. ಆ ಜನಕನಿಗೆ ಬುದ್ಧಿ ಕಲಿಸುತ್ತೇನೆ. ಸೀಸೆಯಲ್ಲಿ ಅದ್ಭುತವಾದ ವಿಚಿತ್ರವನ್ನು ತೆಗೆದು ಕೊಂಡು ಹೋಗುವೆಯಂತೆ" ಎಂದನು.

ದೇವದತ್ತನು ಅಗಲವಾದೊಂದು ಪಾತ್ರದಲ್ಲಿ ಕಡಲೆ ಮೊಳಕೆಯ ಹುಳಿದ್ರಾವಕವನ್ನು ಹಾಕಿ, ಸೀಸೆಯ ಬಾಯಿಗಿಂತಲೂ ದೊಡ್ಡ ಮೊಟ್ಟೆಯನ್ನು ಆ ದ್ರಾವಕದಲ್ಲಿ ಐದು ದಿನಗಳವರೆಗೆ ನೆನೆಯಿಸಿಟ್ಟ. ಆಮೇಲೆ ಆ ಮೊಟ್ಟೆಯನ್ನು ದ್ರಾವಕದಿಂದ ತೆಗೆದಾಗ ಅದು ಮೆತ್ತಗಾಗಿಬಿಟ್ಟಿತ್ತು. ಆ ಸ್ಥಿತಿಯಲ್ಲಿರುವ ಮೊಟ್ಟೆಯನ್ನು ಅವನು ಮೆಲ್ಲಗೆ ಉಪಾಯವಾಗಿ ಸೀಸೆಯೊಳಗೆ ದೂಡಿಹೋಗಿಸಿ, ಅದರೊಂದಿಗೆ ಸೀಸೆಯೊಳಗೆ ಸ್ವಲ್ಪಸ್ವಲ್ಪವಾಗಿ ತಣ್ಣೀರನ್ನು ಸುರಿದನು. ಮೊಟ್ಟೆ ನಿಜರೂಪಕ್ಕೆ ಬಂದು ಮತ್ತೆ ಮೊದಲಿನಂತೆ ಗಟ್ಟಿಯಾಯಿತು.

ಅವಳು ಗಂಡನ ಮನೆಗೆ ಹೊರಡುವ ದಿನ ಸಮೀಪಿಸಿತು. ಗಂಡನೂ ಜತೆಗಿರಲೆಂದು ಅವನಿಗೂ ಹೇಳಿಕಳಿಸಿದರು. ಹೆಂಡತಿಯ ಮೇಲೆ ಪ್ರೀತಿಯಿರುವುದರಿಂದ ಶೀತಳಮತಿ ಕೂಡಲೇ ಹೊರಟು ಬಂದ. ಹೀಗೆ ಸುಲತ ತನ್ನ ಗಂಡ, ತಂದೆತಾಯಿ ಚಿಕ್ಕಪ್ಪಂದಿರೊಂದಿಗೆ ಜನಕನ ಮನೆಗೆ ಹೊರಟಳು.

ಮನೆಯೊಳಗೆ ಪ್ರವೇಶಿಸುವುದಕ್ಕೆ ಮೊದಲು ಸುಲತ ಸೀಸೆಯನ್ನು ಮಾವಯ್ಯನಿಗೆ ತೋರಿಸಿ, "ನೀವು ಸೀಸೆಯೊಳಗೆ ವಿಚಿತ್ರವನ್ನು ತರಲು ಹೇಳಿದಿರಿ, ಹಾಗೆಯೇ ತಂದಿದ್ದೇನೆ. ನೋಡಿರಿ ಮಾವಯ್ಯ" ಎಂದಳು.

ಜನಕನು ಸೀಸೆಯನ್ನು ತೆಗೆದುಕೊಂಡು ಅದರೊಳಗಿರುವ ಮೊಟ್ಟೆಯನ್ನು ಎಲ್ಲಾ ಕಡೆಯಿಂದಲೂ ತಿರುಗಿಸಿ ತಿರುಗಿಸಿ ನೋಡಿದನು. ಸೀಸೆಯಲ್ಲಿ ಎಲ್ಲಿಯೂ ಒಡಕು ಕಾಣಲಿಲ್ಲ. ಆದರೆ ಅದರೊಳಗೆ ದೊಡ್ಡ ಮೊಟ್ಟೆ ಇದ್ದಿತು. ಸೀಸೆಯ ಅಷ್ಟು ಚಿಕ್ಕ ಬಾಯಿಯೊಳಗೆ ದೊಡ್ಡ ಮೊಟ್ಟೆ ಅದು ಹೇಗೆ ಹೊಕ್ಕಿತೋ ? ಅವನಿಗೆ ಬಹಳ ಆಶ್ಚರ್ಯವಾಯಿತು.

"ಅದ್ಭುತವೆಂದು ಇದನ್ನು ಒಪ್ಪುವಿರಷ್ಟೆ ಮಾವಯ್ಯ ?" ಎಂದು ಸುಲತ ಕೇಳಲು, "ಒಪ್ಪಿಕೊಳ್ಳುತ್ತೇನೆ. ನಿಜಕ್ಕೂ ಅದ್ಭುತವೇ. ಇದು ಹೇಗೆ ಸಾಧ್ಯವಾಯಿತು ?" ಎಂದ ಸಾವಧಾನದ ಸ್ವರದಲ್ಲಿ.

"ಅದನ್ನೆಲ್ಲಾ ವಿವರಿಸುವ ಪರತ್ತೇನಿಲ್ಲವಷ್ಟೆ ? ಈಗ ನೀವು ಕೊಟ್ಟ ಮಾತಿನ ಪ್ರಕಾರ ನನ್ನನ್ನು ನನ್ನವರೊಂದಿಗೆ ಪಟ್ಟಣದಲ್ಲಿರಲು ಅನುಕೂಲ ಮಾಡಿಸಿ ಕೊಡಿ ಮಾವಯ್ಯ" ಎಂದಳು ಸುಲತ.

ಜನಕನು ಬೇರೆ ಉಪಾಯವಿಲ್ಲದೆ ಹಾಗೇ ಮಾಡಿದನು. ಸುಲತ ಗಂಡನೊಂದಿಗೆ ಪಟ್ಟಣಕ್ಕೆ ಹೋಗಿ ಅಲ್ಲಿ ಸಂಸಾರ ಹೂಡಿದಳು. ಮುಂದೆ ಅವಳಿಗೆ ಎರಡು ಮಕ್ಕಳಾದರು. ನೆಮ್ಮದಿಯಾಗಿದ್ದಾಳೆ.





# ಕಳ್ಳದೆವ್ವಗಳು

ಒಂದು ಊರಿನಲ್ಲಿ ಇಬ್ಬರು ಕಳ್ಳರು ಒಬ್ಬರಿಗೊಬ್ಬರು ಒತ್ತಾಸೆಯಾಗಿದ್ದರು. ಒಬ್ಬನು ಕಳ್ಳತನ ಮಾಡುವುದರಲ್ಲಿ ತುಂಬ ನಿಪುಣ; ಎರಡನೆಯವನು ಸಿಕ್ಕಿಬೀಳದಂತೆ ತಪ್ಪಿಸಿಕೊಳ್ಳುವ ಉಪಾಯ ಹುಡುಕುವುದರಲ್ಲಿ ಬುದ್ಧಿವಂತ.

ಒಂದುಸಾರಿ ಆ ಊರಿನ ಪಂಡಿತರು ನೆರೆಯ ಗ್ರಾಮದಲ್ಲಿ ನಡೆಯುವ ಮದುವೆಗೆ ಹೋಗಬೇಕಾಯಿತು. ಅವರು ಮುಂಚಿನ ದಿನ ತಮ್ಮ ಮನೆಗೆ ಬೀಗ ಹಾಕಿ ಕುಟುಂಬ ಸಮೇತರಾಗಿ ಹೊರಟುಹೋದರು. ಇದನ್ನೆಲ್ಲ ಗಮನಿಸಿಕೊಂಡಿದ್ದ ಕಳ್ಳರಿಬ್ಬರೂ ಆ ದಿನ ರಾತ್ರಿ ಪಂಡಿತರ ಮನೆಯೊಳಗೆ ಹೊಕ್ಕರು. ಮನೆಯೊಳಗೆ ಸಿಕ್ಕಿದುದನ್ನೆಲ್ಲಾ ಗಂಟು ಕಟ್ಟಿಕೊಂಡು ಹೊರಬೀಳುವ ಉಪಾಯವನ್ನು ಹುಡುಕುತ್ತಿದ್ದರು.

ಆ ಸಮಯದಲ್ಲಿ ಒಬ್ಬ ರೈತ ಮನೆಯೊಳಗೆ ಕಳ್ಳರಿರುವ ಜಾಡು ಹಿಡಿದು, "ಕಳ್ಳರು ! ಕಳ್ಳರು ! ಹಿಡೀರಿ ! ಹಿಡೀರಿ !" ಎಂದು ಕೂಗತೊಡಗಿದ. ಅವನ ಕೂಗು ಕೇಳಿ ಅನೇಕಮಂದಿ ಬಂದು ಪಂಡಿತರ ಮನೆಯನ್ನು ಮುತ್ತಿಗೆ ಹಾಕಿದರು. ಹೊರಗಿನ ಗಲಾಟೆಯನ್ನು ಕೇಳಿ ಒಳಗಿರುವ ಕಳ್ಳರು ಹೆದರಿ, ಒಳಗಿನಿಂದ ಅಗಳಿ ಹಾಕಿ ನಡುಗತೊಡಗಿದರು. ಯುಕ್ತಿಪರನಾದ ಕಳ್ಳ ಬೇಗನೇ ಧೈರ್ಯ ತಂದುಕೊಂಡು ಎರಡನೆಯವನನ್ನು ನೋಡಿ, "ನಾವು ಹೆದರಿಕೊಂಡಿದ್ದರೆ ಲಾಭವಿಲ್ಲ. ಜನರು ಬಾಗಿಲು ಒಡೆದು ಒಳಗೆ ನುಗ್ಗುವುದರೊಳಗೆ ನಾವು ತಪ್ಪಿಸಿಕೊಳ್ಳಬೇಕು." ಎಂದು ಒಂದು ಉಪಾಯ ಪಿಸುಗುಟ್ಟಿದ.

ತರುವಾಯ ಎರಡನೆಯವನು ಹೆಣ್ಣಿನ ಕಂಠ ತಂದುಕೊಂಡು, "ಅದೇನು ಗಲಭೇ ಮಾವಯ್ಯ ?" ಎಂದು ಗಟ್ಟಿಯಾಗಿ ಕೇಳಿದ.

ಮೊದಲನೆಯವನು ಕಂಠವನ್ನು ಬದಲಾಯಿಸಿಕೊಂಡು ಕರ್ಕಶ ಸ್ವರದಿಂದ- "ಎಲೇ ಸಂಗೀ, ಅವರೆಲ್ಲಾ ಹುಚ್ಚು ನರಮನುಷ್ಯರು. ನಾವು ದೆವ್ವಗಳೆಂದು ಗೊತ್ತಿಲ್ಲದೆ ಅವರ ಹಾಗಿನ ಕಳ್ಳ ಮನುಷ್ಯರು ಅಂದುಕೊಂಡು ಗಲಾಟೆ ಮಾಡುತ್ತಿದ್ದಾರೆ. ಉಂ, ನಾವು ಇಲ್ಲಿಗೆ ಸುಮ್ಮನೆ ಬಂದಹಾಗಾಯಿತು. ಇದು ಬ್ರಾಹ್ಮಣನ ಮನೆ ಅಂತ ಗೊತ್ತಾಗದೇ ಹೋಯಿತು. ಇಲ್ಲಿ ಕಿತ್ತು ತಿನ್ನಲು ಒಂದು ಕೋಳಿಯೂ ಇಲ್ಲ, ಮೇಕೆಯೂ ಇಲ್ಲ. ಥೀ ! ಬೆಳಗಾಗಲಿಕ್ಕಾಯಿತು. ಬೇಗ ಆ ದೊಡ್ಡ ಗೌಡನ ಮನೇಗೆ ಹೋಗೋಣ

ಸುರಭಿ ರೇವತಿ

ನಡಿ. ಅಲ್ಲಿ ಬೇಕಾದಷ್ಟು ಮೇಕೆಗಳಿವೆ. ಹೊಟ್ಟೆ ತುಂಬ ತಿಂದು ಬೆಳಗಾಗುವುದರೊಳಗೆ ಮಾಯವಾಗ ಬಹುದು" ಎಂದ. "ಸರಿ, ಹೊರಡು ಮಾವಯ್ಯ. ನನಗೆ ಹಸಿವೆ ತಡಿಯೋಕ್ಕಾಗೋಲ್ಲ" ಎಂದ ಮೊದಲನೆಯವ ಹೆಣ್ಣು ದನಿಯಿಂದ.

ಇದನ್ನೆಲ್ಲಾ ಹೊರಗೆ ನಿಂತು ಕೇಳಿದ ಜನರು, "ಅಯ್ಯಯ್ಯೋ! ದೆವ್ವಗಳು! ದೆವ್ವಗಳು! ಈ ಸಮಾಚಾರ ಬೇಗನೇ ಹೋಗಿ ದೊಡ್ಡ ಗೌಡರಿಗೆ ಹೇಳಿಬಿಡಬೇಕು. ಇಲ್ಲದಿದ್ದರೆ ಅವರ ಮೇಕೆಗಳೆಲ್ಲ ಖಾಲಿಯಾದಾವು!". ಎಂದು ತಮ್ಮೊಳಗೆ ತಾವು ಹೇಳಿಕೊಂಡು, ಒಂದು ನರಪಿಳ್ಳೆಯೂ ಉಳಿಯದಂತೆ ಎಲ್ಲರೂ ದೊಡ್ಡ ಗೌಡನ ಮನೆಗೆ ಓಡಿದರು. ಎಲ್ಲರೂ ಹೊರಟುಹೋದ ಸುಳಿವು ತಿಳಿದು ಕಳ್ಳರು ಕಳವಿನ ಮೂಟೆಗಳೊಂದಿಗೆ ಜಾರಿಬಿಟ್ಟರು.

ಅಲ್ಲಿ ಗಾಢವಾದ ನಿದ್ದೆಯಲ್ಲಿದ್ದ ದೊಡ್ಡ ಗೌಡ, ಜನರ ಕೋಲಾಹಲ ಕೇಳಿ ಗಡಿಬಿಡಿಯಿಂದೆದ್ದು ಒಂದು ಏನು ಏನೆಂದು ಕೇಳಿದ.

"ದೆವ್ವಗಳು! ದೆವ್ವಗಳು, ಗೌಡ್ರೇ! ಪಂಡಿತರ ಮನೆಯಿಂದ ದೆವ್ವಗಳು ನಿಮ್ಮ ಮನೆಗೇ ಹೊರಟಿವೆ!" ಎಂದು ಅಲ್ಲಿ ನಡೆದುದನ್ನೆಲ್ಲಾ ಹೇಳಿದರು. ಒಬ್ಬರಿಬ್ಬರಲ್ಲ, ಎಲ್ಲರೂ ಒಂದೇ ಮಾತು ಹೇಳಿದಾಗ, ದೊಡ್ಡ ಗೌಡನಿಗೂ ದೆವ್ವಗಳ ಭಯ ಹಿಡಿಯಿತು. ಪಶುಗಳ ಹಟ್ಟಿಗೆ ಬಲವಾದ ಕಾವಲು ಗಾರರನ್ನಿಟ್ಟು, ದೊಡ್ಡ ಮಾಂತ್ರಿಕನಿಗೆ ಕೂಡಲೇ ಜನ ಕಳುಹಿಸಿ ಕರೆಯಿಸಿದ.

ಇಬ್ಬರು ಮಾಂತ್ರಿಕರು ಓಡಿಬಂದು, ಮಂತ್ರ ಗಳನ್ನು ಪಟಪಟಿಸುತ್ತ, ಮಂಡಲ ಹಾಕಿ, ಮೊರ ಗಳನ್ನೂ, ಬೇವಿನ ಪಿಂಡಿಗಳನ್ನೂ, ಹೊಸ ಕಸ ಪೊರಕೆಗಳನ್ನೂ ಪ್ರಯೋಗಿಸಿ, ಏನೇನೋ ನಿವಾಳಿಸಿ ಮಂತ್ರ ಹಾಕುತ್ತಿರಲು ಬೆಳಗಾಯಿತು. ಗೌಡನು ಕೊಟ್ಟ ಕಾಣಿಕೆ ದಕ್ಷಿಣೆಗಳನ್ನು ತೆಗೆದುಕೊಂಡು ಮಂತ್ರವಾದಿಗಳು ಹೊರಟುಹೋದರು.

ಮರುದಿನ ಪಂಡಿತನು ಕುಟುಂಬ ಸಮೇತ ತನ್ನ ಮನೆಗೆ ಬರುತ್ತಿರುವಾಗ ಗ್ರಾಮಸ್ಥರು ಅವನಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದರು. ಆದರೆ ಮನೆಯೊಳಗೆ ನೋಡಿದರೆ, ಎಲ್ಲಾ ಬಳಿದುಹೋಗಿತ್ತು. ಪಂಡಿತರು ಕೋಪದಿಂದ ಊರಜನರನ್ನು ನೋಡಿ, "ಎಲ್ಲಾ ಮುಟ್ಠಾಳರು. ದೆವ್ವಗಳಂತೆ! ಇಷ್ಟುಮಂದಿ ಕೂಡಿ ಕೂಡಾ ನನ್ನ ಮನೆ ಕೊಳ್ಳೆಹೋಗಿಸಿಬಿಟ್ಟಿರಿ!" ಎಂದು ಅರ್ಚನೆ ಮಾಡಿದರು.

ಈ ಸಂಗತಿ ದೊಡ್ಡ ಗೌಡನಿಗೂ ಗೊತ್ತಾಯಿತು. "ಛೀ! ನನ್ನ ಬುದ್ಧಿಗೆ! ಸುಮ್ಮಸುಮ್ಮನೆ ಮಾಂತ್ರಿ ಕರ ಹೊಟ್ಟೆಗಿಷ್ಟು ದಕ್ಷಿಣೆ ಸುರಿದೆನಲ್ಲಾ!" ಎಂದು ಹಳಹಳಿಸಿಕೊಂಡನು.



# ಬೇಟೆಗಾರನ ಮಗ

ಒಬ್ಬ ಬೇಟೆಗಾರನ ಮಗನಿಗೆ ಯಾವಾಗ ನೋಡಿದರೂ ಸಂದೇಹವೇ.

ಒಂದುದಿನ ತಂದೆ ಅವನನ್ನು ಕುರಿತು, "ಅಪ್ಪಾ, ಮಗನೇ, ಈದಿನ ನನಗೆ ಮೈ ಹುಷಾರಿಲ್ಲ. ನೀನು ಕಾಡಿಗೆ ಹೋಗಿ ಯಾವುದಾದರೂ ಮೊಲವನ್ನೋ ಜಿಂಕೆ ಮರಿಯನ್ನೋ ಹೊಡೆದು ತಾರಪ್ಪಾ. ನಿನಗೂ ಬೇಟೆಯಲ್ಲಿ ಅಭ್ಯಾಸವಾಗಬೇಕಷ್ಟೆ?" ಎಂದನು.

ಮಗ ಬೇಟೆಗೆ ಹೋಗಿ ಬಹಳ ತಿರುಗಾಡಿದ. ಯಾವ ಪ್ರಾಣಿಯೂ ಅವನಿಗೆ ಸಿಗಲಿಲ್ಲ. ಕಡೆಗೆ ಬಾಯಾರಿಕೆ ತೀರಿಸಿಕೊಳ್ಳಲು ಒಂದು ಕೊಳದ ಬದಿಗೆಹೋದ. ಅಲ್ಲಿ ನೀರು ಕುಡಿಯುತ್ತಿದ್ದ ಒಂದು ಮೊಲವೂ ಒಂದು ಜಿಂಕೆ ಮರಿಯೂ ಕಾಣಿಸಿದುವು.

ಅವನಿಗೆ ಸಂದೇಹ ಬಂತು. ಮೊಲವನ್ನು ಹೊಡೆಯುವಾಗ ಜಿಂಕೆ ಮರಿ ಓಡುತ್ತದೆ, ಜಿಂಕೆಗೆ ಹೊಡೆಯುವಾಗ ಮೊಲ ಓಡುತ್ತದೆ. ಯಾವುದನ್ನು ಹೊಡೆಯುವುದು?

ಕೂಡಲೇ ಅವನು ಓಡುತ್ತಾ ಮನೆಗೆ ಬಂದು, "ಅಪ್ಪಾ, ನೀವು ಹೇಳಿದ ಮೊಲವೂ ಜಿಂಕೇ ಮರಿಯೂ ಕೊಳದಲ್ಲಿ ನೀರು ಕುಡಿಯುತ್ತಾ ಇವೆ. ನಿಮಗೆ ಯಾವುದು ಬೇಕಂತ ಹೇಳಿ, ಹೊಡೆದು ತಂದು ಬಿಡುತ್ತೇನೆ" ಎಂದ.

"ಎಲೋ ಬುದ್ಧಿಗೇಡಿ ಮಡೆಯಾ! ನೀನು ಹೋಗುವವರೆಗೂ ಅವು ಅಲ್ಲೇ ಇರುತ್ತವೇನು? ಇನ್ನು ಹೋಗೋದು ಗಾಳಿಗೆ ಗುದ್ದಲಿಕ್ಕೇ" ಎಂದು ಮಗನ ಮೂರ್ಖತನಕ್ಕಾಗಿ ತಂದೆ ಚಿಂತಿಸಿದ.



ಕ್ಕ ಮಾಡುತ್ತ ಮೂಟೆ ಕಟ್ಟಿ
ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರಪಡಿಸಿ



# ಮಂದಮತಿ

ಒಂದು ಊರಿನಲ್ಲಿ ಒಬ್ಬ ಹುಡುಗ ಬೆಳೆದು ದೊಡ್ಡವನಾಗುತ್ತಾ ಬಂದರೂ ಅವನ ಬುದ್ಧಿಮಾತ್ರ ಬೆಳೆಯಲೇ ಇಲ್ಲ. ಹೊಟ್ಟೆಯ ಪಾಡಿಗಾಗಿ ಏನಾದರೂ ಕೆಲಸ ಹುಡುಕಿ ಕಡೆಗೆ ಒಂದು ಜವುಳಿ ಅಂಗಡಿಯಲ್ಲಿ ಕೆಲಸಕ್ಕೆ ಸೇರಿದ. ಬಟ್ಟೆಗಳ ವ್ಯಾಪಾರಕ್ಕೆ ಸಂಬಂಧಪಟ್ಟ ಚಿಲ್ಲರೆ ಕೂಲಿ ಕೆಲಸಗಳನ್ನು ಮಾಡುತ್ತಾ ಇದ್ದ.

ಒಂದುದಿನ ಮಂದಮತಿಗೆ ಅಲ್ಲಿ ಯಾವ ಕೆಲಸವೂ ಇರಲಿಲ್ಲ. ಅವನು ಸುಮ್ಮನಿರುವುದನ್ನು ನೋಡಿ, ವರ್ತಕನು ಅವನಿಗೊಂದು ಬಟ್ಟೆಯ ಥಾನು ಕೊಟ್ಟು ' ನೋಡಪ್ಪಾ. ಇದನ್ನು ತೆಗೆದುಕೊಂಡು ಹೋಗಿ ಮಾರಿಕೊಂಡು ಬಾ. ಲಾಭದಲ್ಲಿ ನಿನಗೆ ಪಾಲು ಕೊಡ್ತೇನೆ " ಎಂದ. ಈ ವಿಧವಾಗಿ ಮಂದ ಮತಿಗೆ ವ್ಯಾಪಾರದಲ್ಲಿ ಇನ್ನಿಷ್ಟು ಚಾಕಚಕ್ಯತೆ ಬರುತ್ತದೆಂದು ವರ್ತಕನ ಉದ್ದೇಶವಾಗಿತ್ತು.

" ಇದನ್ನು ಎಷ್ಟಕ್ಕೆ ಮಾರಬೇಕು ? " ಎಂದು ಮಂದ ಮತಿ ಯಜಮಾನನನ್ನು ಕೇಳಿದ.

" ಈಗ ... ಈ ಬಟ್ಟೆ ನಾನು ಮಾರಿದ್ದು ...ಗೂ ಈಚೆಗೂ ಆದರೂ ಚಿಂತೆಯಿಲ್ಲ, ಮಾರಿಬಿಡು " ಎಂದ ವರ್ತಕ. ಯಜಮಾನ ಹೇಗೆ ಮಾರಿದನೆಂಬುದನ್ನು ಅವನು ಗಮನಿಸಿರಲಿಲ್ಲ. ಅದನ್ನು ಹೇಳಿದರೆ ಅವನಿಗೆ ಸಿಟ್ಟು ಬರುತ್ತದೆಂದುಕೊಂಡು ಮಂದಮತಿ, " ಸರಿ ಸರಿ " ಎನ್ನುತ್ತ ಬಟ್ಟೆಯ ಥಾನು ತೆಗೆದುಕೊಂಡು ಹೊರಟ.

ಅವನು ಬಟ್ಟೆಯ ಥಾನನ್ನು ದೊಡ್ಡ ಪೇಟೆಗೆ ಒಯ್ದು, ಬೀದಿ ಬದಿಯಲ್ಲಿ ಒಂದುಕಡೆಯಲ್ಲಿ ಇಟ್ಟುಕೊಂಡು ಕುಳಿತ. ಯಾರಾದರೂ ಅವನ ಹತ್ತಿರ ಬಂದು, " ಥಾನಿಗೆ ಹೇಗೆ ಬೆಲೆ ? " ಎಂದು ಕೇಳಿದರೆ " ಒಂದಾಣೆ ಆಚೆಗೂ ಈಚೆಗೂ ಆಗಿ ಕೊಟ್ಟು ಬಿಡುತ್ತೇನೆ " ಎನ್ನುತ್ತಿದ್ದ. ಅದೇನೋ ಹಾಸ್ಯ ಮಾಡುತ್ತಾನೆಂದುಕೊಂಡು, ಕೇಳಿದವರು ನಗುತ್ತಾ ಹೊರಟು ಹೋಗುತ್ತಿದ್ದರು. ಕೆಲವರು ಅವನನ್ನು ಒಂದು ಮಾದರಿಯಾಗಿ ನೋಡಿದರು.

ಅವನ ಮಾತಿನ ರೀತಿಯನ್ನು ಗಮನಿಸಿಕೊಂಡಿದ್ದ ಒಬ್ಬನು ಮಂದಮತಿಗೆ ಬುದ್ಧಿ ಶೂನ್ಯವೆಂದುಕೊಂಡು, ತನ್ನ ಎರಡು ಕೈಗಳಲ್ಲಿ ಎರಡು ಆಣೆಗಳನ್ನು ತೋರಿಸಿ, " ಇಕ್ಕೋಪ್ಪಾ, ಬಟ್ಟೆ ಥಾನು ಕೊಟ್ಟು ಬಿಡಪ್ಪಾ " ಎಂದ. ಒಂದು ಆಣೆ ಆಚೆಗೂ

...ನ್. ಸರಳಾದೇವಿ

ಇನ್ನೊಂದು ಆಣೆ ಈಚೆಗೂ ಇರುವುದರಿಂದ ವ್ಯಾಪಾರ ಸರಿಯಾಯಿತೆಂದುಕೊಂಡು ಮಂದಮತಿ ಆ ಥಾನನ್ನು ಅವನಿಗೆ ಕೊಟ್ಟು, ಅವನು ಕೊಟ್ಟ ಎರಡು ನಾಣ್ಯಗಳನ್ನೂ ತೆಗೆದುಕೊಂಡ.

ಆಗ ಮಂದಮತಿಗೆ ತುಂಬ ಹಸಿವೆಯಾಗುತಿತ್ತು. ಒಂದು ಅಂಗಡಿಯ ರೊಟ್ಟಿಯ ಪರಿಮಳ ಅವನನ್ನು ಆಕರ್ಷಣೆ ಮಾಡಿತು. ಎರಡಾಣೆಗಳಿಗೆ ಒಂದು ರೊಟ್ಟಿ ಕೊಂಡುಕೊಂಡು, ಒಂದು ಕಡೆಯಲ್ಲಿ ತಿನ್ನಲಿಕ್ಕಾಗಿ ಕುಳಿತ. ಅಷ್ಟರಲ್ಲಿ ಎಲ್ಲಿಂದಲೋ ಬಂದ ಒಂದು ಕಂತ್ರೀನಾಯಿ ಅವನ ಕೈಯಿಂದ ರೊಟ್ಟಿಯನ್ನು ಎಳೆದುಕೊಂಡು ಓಡಿಹೋಯಿತು.

ಮಂದಮತಿ ಹಸಿವೆ ತಾಳಲಾಗದೆ ತನ್ನ ಯಜಮಾನನಾದ ವರ್ತಕನಬಳಿಗೆ ಬೇಗಬೇಗನೆ ಹೋಗಿ, "ನೀವು ನನಗೆ ಮಾರುವುದಕ್ಕೆ ಒಂದು ಥಾನು ಕೊಟ್ಟಿರಿ. ಹತ್ತಿಪ್ಪತ್ತು ಥಾನು ಕೊಟ್ಟಿರುತ್ತಿದ್ದರೆ ಎಲ್ಲಾ ಮಾರಿಬಿಡುತ್ತಿದ್ದೆ. ಒಂದು ಥಾನು ಮಾರಿ ನನ್ನ ಹೊಟ್ಟೆಗೂ ಇಲ್ಲದೆ ಹೋಯಿತು" ಎಂದ.

"ಸರಿ. ಇವತ್ತು ಕೊಟ್ಟ ಬಟ್ಟೇ ಥಾನು ಮಾರಿದ ಹಣ ಕೊಡು. ನಾಳೆ ಇನ್ನೂ ಹೆಚ್ಚು ಥಾನು ಕೊಡುತ್ತೇನೆ." ಎಂದ ವರ್ತಕ.

"ಅದೇ ಹೇಳ್ತಾ ಇದ್ದೇನೆ. ಒಂದು ಥಾನು ಮಾರಿ ಸಿಕ್ಕಿದ ದುಡ್ಡಿನಿಂದ ರೊಟ್ಟಿ ಕೊಂಡುಕೊಂಡೆ. ಅದನ್ನು ನಾಯಿ ಕಚ್ಚಿಕೊಂಡು ಹೋಯಿತು. ಪ್ರಮಾಣಮಾಡಿ ಹೇಳ್ತೀನೆ. ನಾನೊಂದು ಚೂರೂ ತಿಂದಿಲ್ಲ" ಎಂದ ಮಂದಮತಿ.

ಈ ಮಾತು ಕೇಳಿ ವರ್ತಕನಿಗೆ ವಿಪರೀತ ಸಿಟ್ಟು ಬಂದು, "ಏನೋ ನೀನು ಬೊಗಳೋದು? ಬಟ್ಟೆ ಮಾರಿದ ಹಣ ತಂದು ಕೊಡದಿದ್ದರೆ ನಿನ್ನ ಹೊಡೆದು ಕೊಂದು ಹಾಕೇನು. ಜಾಗ್ರತೆ! ಮೈಮೇಲೆ ಎಚ್ಚರಿದೆಯೇನೋ" ಎಂದು ಕಣ್ಣು ತಿರುಗಿಸುತ್ತ ಮಂದಮತಿಯ ಮೇಲೆ ಎಗರಾಡಿದ.



ಮಂದಮತಿ ಹೆದರಿ ಅಲ್ಲಿಂದ ಓಡಿಹೋಗಿ, ತನ್ನ ರೊಟ್ಟಿ ಕಚ್ಚಿಕೊಂಡು ಹೋದ ನಾಯಿಯನ್ನು ಹುಡುಕ ತೊಡಗಿದ. ತುಂಬ ಅಲೆದು ಹುಡುಕಿದ ಮೇಲೆ ಆ ನಾಯಿ ಒಂದು ಮಿಠಾಯಿ ಅಂಗಡಿ ಬದಿಯ ಕುಪ್ಪೆಯಲ್ಲಿ ನೆಮ್ಮದಿಯಾಗಿ ಎಂಜಲೆಲೆ ನೆಕ್ಕುತ್ತಿರುವುದನ್ನು ನೋಡಿದ.

ಮಂದಮತಿ ಆ ನಾಯಿಯ ಕಡೆಗೆ ಹಾಯ್ದು, "ಒಳ್ಳೇ ಮಾತಿನಲ್ಲಿ ನನ್ನ ಹಣ ಕೊಡು. ಕೊಂದುಬಿಡ್ತೇನೆ" ಎಂದು ಕೂಗಿದ.

ನಾಯಿ ಯೊಂಯ್ಯನೆ ಅರಚಿ ಬಾಲ ಮಡಚಿ ಓಡುತ್ತಾ, ಒಬ್ಬ ಧನಿಕನ ಮನೆಯ ಆವರಣದೊಳಗೆ ನುಸುಳಿ ತಪ್ಪಿಸಿಕೊಂಡಿತು. ಅದರ ಹಿಂದೆಯೇ ಮಂದಮತಿಯೂ ಅಲ್ಲಿ ಹೊಕ್ಕ.

ಆ ಸಮಯದಲ್ಲಿ ಆ ಮನೆಯ ಧನಿಕ, ತದೇಕ ದೃಷ್ಟಿಯಿಂದ ಹಣ ಲೆಕ್ಕ ಮಾಡುತ್ತ ಮೂಟೆ ಕಟ್ಟಿ ಕಟ್ಟಿ ಒಳಗಿನ ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರಪಡಿಸಿ

ಕೊಂಡಿದ್ದ. ಅವನು ಒಂದು ನಿಮಿಷ ಒಳಗೆಹೋದ ಸಮಯದಲ್ಲಿ ಮಂದಮತಿ ಚಾವಡಿಯಲ್ಲಿಟ್ಟ ಒಂದು ಮೂಟೆ ಎತ್ತಿಕೊಂಡು ಅಲ್ಲಿಂದ ಹೊರಬಿದ್ದು ಬೇಗ ಬೇಗನೆ ಸಾಗಿ ತನ್ನ ಯಜಮಾನನಿಗೆ ಆ ಮೂಟೆಯನ್ನು ಕೊಟ್ಟುಬಿಟ್ಟ.

ಅವನು ಮಾರಿದ ಬಟ್ಟೆಯ ಥಾನಿಗೆ ಒಳ್ಳೆಯ ಬೆಲೆಯೇ ಬಂದಿತೆಂದು ವರ್ತಕನು ಸಂತೋಷಪಟ್ಟು, ಅವನಿಗೂ ಸ್ವಲ್ಪ ಹಣಕೊಟ್ಟು, "ನಾಳೆ ಬಾ" ಎಂದು ಹೇಳಿ ಕಳುಹಿಸಿಬಿಟ್ಟ.

ಇಷ್ಟರೊಳಗೆ ಯಾವನೋ ತನ್ನ ಹಣದ ಮೂಟೆಯನ್ನು ಕದ್ದುಕೊಂಡು ಹೋದನೆಂದು ಆ ಮನೆಯ ಧನಿಕ ಫಿರ್ಯಾದು ಕೊಟ್ಟುದರಿಂದ, ರಕ್ಷಕಭಟರು ಕೆಲವು ಆಧಾರದ ಮೇಲೆ ಮರುದಿನ ಮಂದಮತಿಯನ್ನು ಹುಡುಕಿ ಹಿಡಿದರು. ರಕ್ಷಣಾಧಿಕಾರಿ ಅವನನ್ನು ನೋಡಿ, "ನೀನು ಆ ಧನಿಕರ ಮನೆಯಿಂದ ಒಂದು ಹಣದ ಚೀಲ ಕೇಳದೆ ಒಯ್ದಿಯಾ?" ಎಂದು ಕೇಳಿದ.

"ಹೌದು. ಒಯ್ದಿದ್ದೇನೆ" ಎಂದ ಮಂದಮತಿ. "ಯಾವಾಗ ಒಯ್ದೆ?" ಎಂದು ಅಧಿಕಾರಿ ಪ್ರಶ್ನೆ ಮಾಡಲು, "ನಾಯಿಯನ್ನು ಓಡಿಸಿಕೊಂಡು ಹೋದ ದಿನ, ಅದೇ ಹೊತ್ತಿನಲ್ಲಿ ಅದೇ ಮನೆಯಲ್ಲಿ" ಎಂದು ಉತ್ತರ ಕೊಟ್ಟ ಮಂದಮತಿ.

"ನಾಯಿಯನ್ನು ಓಡಿಸಿಕೊಂಡು ಹೋದದ್ದು ಯಾವಾಗ? ಸರಿಯಾಗಿ ಹೇಳು" ಎಂದು ಅಧಿಕಾರಿ ಕೇಳಿದ. "ಹಣದ ಚೀಲ ಎತ್ತಿಕೊಂಡೆನಲ್ಲಾ, ಅದೇ ದಿನ." ಎಂದ ಮಂದಮತಿ.

ಅಧಿಕಾರಿಗೆ ಏನೂ ತೋರದೆ, "ನಿನ್ನ ಮನೆಯೆಲ್ಲಿದೆ?" ಎಂದು ಪ್ರಶ್ನೆ ಮಾಡಿದ. ಬ್ರಾಹ್ಮಣರ ಮನೆಯ ಎದುರಿನಲ್ಲಿದೆ." ಎಂದ ಮಂದಮತಿ. "ಬ್ರಾಹ್ಮಣರ ಮನೆ ಇರುವುದೆಲ್ಲಿ?" ಎಂದು ಅಧಿಕಾರಿ ಕೇಳಲು, "ನಮ್ಮ ಮನೆಯ ಎದುರಿನಲ್ಲೇ ಇದೆ" ಎಂದ ತಟ್ಟನೆ.

ರಕ್ಷಣಾಧಿಕಾರಿ ಹುಬ್ಬು ಗಂಟು ಹಾಕಿ, "ಆ ಎರಡು ಮನೆಗಳೂ ಎಲ್ಲಿವೆ ಅಂತ ಕೇಳೋದು" ಎಂದ. "ಒಂದಕ್ಕೊಂದು ಎದುರುಬದುರಾಗೇ ಇವೆ." ಎಂದ ಮಂದಮತಿ.

ಮಂದಮತಿಗೆ ಬುದ್ಧಿಯಿಲ್ಲವೆಂದು ರಕ್ಷಣಾಧಿಕಾರಿಗೆ ತಿಳಿಯಿತು. ನಾಯಿಯ ಹಿಂದೆ ಹೋಗಿ ಯಾವುದೋ ಕುಪ್ಪೆಯಿಂದ ಏನನ್ನೋ ತೆಗೆದುಕೊಂಡ ಮೂರ್ಖನಿರಬೇಕೆಂದುಕೊಂಡು ರಕ್ಷಣಾಧಿಕಾರಿ ಅವನನ್ನು ಬಿಟ್ಟುಬಿಟ್ಟ. ಮಂದಮತಿಗೆ ಮತಿಮಂದ ಮಾತ್ರವಲ್ಲದೆ ಮರೆವೂ ತುಂಬ ಇತ್ತು. ತಾನು ಕೆಲಸ ಮಾಡಿದ ಅಂಗಡಿ ಯಾವುದೆಂಬುದನ್ನೂ ಮರೆತುಬಿಟ್ಟಿದ್ದ.



# ೧೬೦. ಮೇರು ಪರ್ವತ

ಉತ್ತರ ಕುರುಪ್ರಾಂತವು ಭೂಲೋಕಸ್ವರ್ಗವೆಂದು, ಅಜೇಯವಾದುದೆಂದು, ಅದು ಹಿಮಾಲಯಕ್ಕೆ ಆಚೆಗೆ ಇರುವುದೆಂದು, ಅಲ್ಲಿನ ನಿವಾಸಿಗಳೆಲ್ಲ ಪಾಪವಿಲ್ಲದವರೆಂದು, ಭೂಮಿಯನ್ನುಳುವುದೂ ರಥಗಳಲ್ಲಿ ತಿರುಗುವುದೂ ಅವರಿಗೆ ತಿಳಿಯದೆಂದು ಐತರೇಯ ಬ್ರಾಹ್ಮಣ, ಬೌದ್ಧಗ್ರಂಥ ಮೊದಲಾದ ಪ್ರಾಚೀನ ಕೃತಿಗಳಲ್ಲಿವೆ. ಅದೇ ಈಗಿನ "ಪಾಮಿರ್" ಎಂಬ ಪ್ರಾಂತ. ಅದು ಇತ್ತೀಚಿನವರೆಗೂ ಮಾನವರಿಗೆ ವಶವಾಗದೆಯೇ ಇದ್ದಿತು. ಸೋವಿಯೆಟ್ ಪರಿಪಾಲನೆಯಲ್ಲಿ ಇಲ್ಲಿ ನಾಗರಿಕತೆ ಹೆಚ್ಚುತ್ತಬರುತ್ತಿದೆ. ಉದ್ಯಾನವನಗಳಾಗಿವೆ. ವಿದ್ಯುಚ್ಛಕ್ತಿ ಹರಿಯುತ್ತಿದೆ. ತಿರುಪತಿಯಂತೆ ಇದು ಕೂಡಾ ಸಪ್ತಗಿರಿ. ಇದನ್ನೇ ಹಿಂದಿನವರು ಮೇರು ಪರ್ವತವೆಂದರೆಂದು ಗೊತ್ತಾಗಿದೆ.







# ಅಪೂರ್ವ ವಸ್ತು

ಬಹಳ ಹಿಂದಿನ ಕಾಲದಲ್ಲಿ ವಿದರ್ಭ ದೇಶವನ್ನು ಒಬ್ಬ ರಾಜನು ಆಳಿಕೊಂಡಿದ್ದ. ಅವನು ತನ್ನ ಪಟ್ಟಾಭಿಷೇಕದ ದಿನವನ್ನು ಪ್ರತಿ ವರ್ಷವೂ ಹಬ್ಬವನ್ನಾಗಿ ಆಚರಿಸುತ್ತಿದ್ದ. ಆ ಸಮಯದಲ್ಲಿ ರಾಜನು ತನಗೆ ಅಪೂರ್ವ ವಸ್ತುವನ್ನು ಕಾಣಿಕೆಯಾಗಿ ಕೊಟ್ಟವರಿಗೆ ಹತ್ತುಸಾವಿರ ಬಂಗಾರದ ನಾಣ್ಯಗಳನ್ನು ಬಹುಮಾನ ಕೊಡುತ್ತಿದ್ದ.

ಅದೇ ರಾಜ್ಯದಲ್ಲಿ ಪ್ರವರನೆಂಬ ಮಂತ್ರವೈದ್ಯನಿದ್ದ. ಅವನು ಬಹಳ ಕಾಲ ಸಂಶೋಧನೆ ನಡೆಸಿ ಅದ್ಭುತವಾದೊಂದು ರಸಾಯನವನ್ನು ತಯಾರಿಸಿದ. ಅದನ್ನು ಯಾರಾದರೂ ಯಾವ ರೂಪ ತಾಳಬೇಕೆಂದು ನೆನೆಯುತ್ತ ಕುಡಿದುಬಿಟ್ಟರೆ ಆ ರೂಪ ಬಂದುಬಿಡುತ್ತಿತ್ತು. ಆದರೆ ಅಂಥವರಿಗೆ ಮತ್ತೆ ಮೊದಲಿನ ರೂಪ ಬೇಕೆಂದರೆ ಅದಕ್ಕೊಂದು ಪ್ರತಿರಸಾಯನ ಬೇಕಾಗಿತ್ತು. ಅದನ್ನು ತಯಾರಿಸಲು ಪ್ರವರನಿಗೆ ಸಾಧ್ಯವಾಗಲಿಲ್ಲ. ಆದುದರಿಂದ ಅವನು ತನ್ನ ಅದ್ಭುತ ರಸಾಯನವನ್ನು ಯಾರ ಮೇಲೆಯೂ ಪ್ರಯೋಗಿಸದೆ, ರಾಜನೊಂದಿಗೆ ಅದರ ಪ್ರಭಾವವನ್ನು ಹೇಳಿ, ರಾಜನು ಕೊಡುವ ಒಂದು ವರ್ಷದ ಬಹುಮಾನವನ್ನು ಪಡೆದು ಧನ್ಯನಾಗೋಣವೆಂದು ಅವನಿಗೆ ತೋರಿತು. ಅದರಂತೆ ಅವನು ಆ ರಸಾಯನವನ್ನು ಒಂದು ಪಾತ್ರದಲ್ಲಿ ಹಾಕಿಕೊಂಡು ತಂದು ರಾಜನಿಗೆ ತೋರಿಸಿ, ಅದರ ಪ್ರಭಾವವನ್ನು ವಿವರಿಸಿ ಹೇಳಿದನು.

"ಮಹಾರಾಜರೆ, ಇದಕ್ಕೆ ಪ್ರತಿರೋಧವಾದ ರಸಾಯನ ತಯಾರಿಸಲು ಮುಖ್ಯವಾದೊಂದು ವಸ್ತು ಸಿಗಲಿಲ್ಲ. ಆದುದರಿಂದ ಇದನ್ನು ಈವರೆಗೂ ಯಾರ ಮೇಲೆಯೂ ಪ್ರಯೋಗಿಸಲಿಲ್ಲ. ತಾವು ಈ ರಸಾಯನವನ್ನು ಈ ವರ್ಷದ ಅಪೂರ್ವ ವಸ್ತುವೆಂದು ಪರಿಗಣಿಸಿ ನನಗೆ ಬಹುಮಾನ ಕೊಡಿಸಿದರೆ ನನ್ನ ಶ್ರಮವು ಸಾರ್ಥಕವೆನಿಸುತ್ತದೆ" ಎಂದ ಪ್ರವರ.

"ಇದನ್ನು ಪರೀಕ್ಷೆ ಮಾಡದೆ ಅಪೂರ್ವ ವಸ್ತುವೆಂದು ಹೇಗೆ ನಿಶ್ಚಯವಾಗಿ ಹೇಳಲಾದೀತು? ನಿನ್ನ ಮಗನಿಗೇ ಇದನ್ನು ಕುಡಿಸಿ, ಇದರ ಪ್ರಭಾವವನ್ನು ನಿರೂಪಿಸಿಬಿಡು" ಎಂದು ರಾಜನು ಪ್ರವರನ ಮಗನನ್ನು ಕರೆದುಕೊಂಡು ಬರುವಂತೆ ಭಟರನ್ನು ಕಳುಹಿಸಿದನು. ಪ್ರವರನು ಬೇಡಬೇಡವೆಂದು ಎಷ್ಟೇ ಬೇಡಿಕೊಂಡರೂ ರಸಾಯನದ ಪ್ರಭಾವವನ್ನು ನೋಡಬೇಕೆಂಬ ಕುತೂಹಲದಲ್ಲಿದ್ದ ರಾಜನಿಗೆ ಅವನ

ಟಿ. ಆರ್. ರಾಜಗೋಪಾಲ್

ದುಃಖ ಕಿವಿಗೇರಲಿಲ್ಲ. ರಾಜಭಟರು ಹೋಗಿ ಪ್ರವರನ ಮಗ ಹನ್ನೆರಡು ವರ್ಷದ ಹುಡುಗನನ್ನು ರಾಜನ ಮುಂದೆ ತಂದು ನಿಲ್ಲಿಸಿದರು. ರಾಜ ಅವನೊಂದಿಗೆ, "ಏನಪ್ಪ, ನಿನಗೆ ಪಕ್ಷಿಯಾಗಿ ಹಾರಬೇಕೆಂದಿದೆಯೋ? ಜಿಂಕೆಯಾಗಿ ಓಡಬೇಕೆಂದಿದೆಯೋ? ಏನಾದರೆ ಸಂತೋಷ ಕಾಣುತ್ತದೋ ಅದನ್ನು ನೆನೆದುಕೊಂಡೇ ಈ ಔಷಧ ಕುಡಿ" ಎಂದನು.

ಪ್ರವರ ವೈದ್ಯ ಬೇಡಬೇಡವೆಂದು ಅಳಲು ತೊಡಗಿದರೂ ರಾಜನು ಲಕ್ಷ್ಯಮಾಡದೆ, "ಏಕೆ ಚಿಂತಿಸುವೆ? ಹೇಗಿದ್ದರೂ ನೀನು ಪ್ರತಿರೋಧದ ಔಷಧವನ್ನು ಕಂಡುಹಿಡಿಯದೆ ಬಿಡಲಾರೆ. ನಿನ್ನ ಮಗನಿಗೆ ಯಥಾರೂಪ ಬರುವಂತೆ ಮಾಡಿಕೋ. ನಿನಗೆ ಮತ್ತೊಂದು ಬಹುಮಾನ ಕೂಡ ಕೊಡುತ್ತೇನೆ" ಎಂದ ರಾಜ.

ಪ್ರವರನ ಮಗನು ನಿನ್ನೆತಾನೇ ಒಂದು ಜಿಂಕೆಯನ್ನು ನೋಡಿ ಮೆಚ್ಚಿದ್ದ. ಆದುದರಿಂದ ಅವನು ಜಿಂಕೆಯನ್ನು ನೆನೆಯುತ್ತಾ ಆ ಔಷಧವನ್ನಿಷ್ಟು ಕುಡಿದು ಜಿಂಕೆಯಾಗಿ ಬದಲಾಯಿಸಿಬಿಟ್ಟ.

ಪ್ರವರ ವೈದ್ಯ ಗೋಳಿಡುವುದನ್ನು ನೋಡಿ ರಾಜ, "ಸುಮ್ಮನೆ ಅಳುವುದುಂಟೆ? ಬಹುಮಾನದ ಧನ ತೆಗೆದುಕೋ. ಪ್ರತಿರೋಧ ರಸಾಯನವನ್ನು ಆದಷ್ಟು ಬೇಗನೇ ಕಂಡುಹಿಡಿದುಬಿಡು" ಎಂದು ಸಮಾಧಾನ ಹೇಳಿದ. "ಅದಕ್ಕೆ ಬೇಕಾದ ಒಂದು ವಸ್ತು ಸಿಗುವುದೇ ದುರ್ಲಭ." ಎಂದ ಪ್ರವರವೈದ್ಯ ಹಣೆ ಬಡಿದುಕೊಳ್ಳುತ್ತ.

"ಅದಾವುದು ಅಂತಹ ವಸ್ತು?" ಎಂದು ರಾಜನು ಕೇಳಲು, "ಐವತ್ತು ವರ್ಷ ದಾಟಿ, ರಾಜವಂಶದಲ್ಲಿ ಹುಟ್ಟಿದವನ ಬಲಗಣ್ಣು ಅದಕ್ಕೆ ಬೇಕು. ಅದು ಸಿಕ್ಕಿದ ಹೊರತು ಪ್ರತಿರೋಧ ಔಷಧ ತಯಾರಾಗಲಾರದು." ಎಂದ ಪ್ರವರ.

"ಅಷ್ಟೇತಾನೆ? ನನ್ನ ಶತ್ರುವಾದ ಕೋಸಲ ರಾಜನಿಗೆ ಐವತ್ತು ವರ್ಷ ಮೀರಿಹೋಗಿದೆ. ನಾನು ಅವನ ಮೇಲೆ ದಂಡೆತ್ತಿ ಹೋಗಿ, ಅವನನ್ನು ಸೆರೆ ಹಿಡಿದು ಅವನ ಬಲಗಣ್ಣನ್ನು ಕಿತ್ತು ಕೊಡುತ್ತೇನೆ. ಅವಸರಪಡಬೇಡ" ಎಂದ ರಾಜ.



ಪ್ರವರ ವೈದ್ಯನು ದುಃಖಿಸುತ್ತಾ, ಜಿಂಕೆಯಾಗಿ ಹೋದ ತನ್ನ ಮಗನನ್ನು ಕರೆದುಕೊಂಡು ಮನೆಗೆ ಹೋದ. ರಾಜನ ಸೇವಕರು ಬಹುಮಾನವನ್ನು ಅವನ ಮನೆಗೆ ಸೇರಿಸಿದರು.

ವಿದರ್ಭರಾಜನಿಗೆ ಕೂಡಾ ಹನ್ನೆರಡು ವರ್ಷ ವಯಸ್ಸಿನ ಒಬ್ಬ ಮಗನಿದ್ದ. ಆ ರಾಜಕುಮಾರನೂ ಪ್ರವರನ ಮಗನೂ ಒಂದೇ ಗುರುವಿನ ಬಳಿಯಲ್ಲಿ ಓದಿಕೊಳ್ಳುತ್ತ ಸ್ನೇಹಿತರಾಗಿದ್ದರು. ಒಂದು ದಿನ ರಾಜನ ಮಗನು ತನ್ನ ಗೆಳೆಯನನ್ನು ನೋಡಲು ಪ್ರವರನ ಮನೆಗೆ ಬಂದನು. ಆಗ ಪ್ರವರನು ಅವನನ್ನು ನೋಡಿ, "ಹಾಳಾಗಿಹೋದ ರಸಾಯನವನ್ನು ತಯಾರಿಸಿ ವಂಶನಾಶನವನ್ನೇ ತಂದುಕೊಂಡೆ. ಈ ರಸಾಯನದಿಂದಲೇ ನಿನ್ನ ಗೆಳೆಯ, ನನ್ನ ಮುದ್ದು ಮಗ ಹೀಗಾಗಿಬಿಟ್ಟ" ಎಂದು ಜಿಂಕೆ ರೂಪದ ತನ್ನ ಮಗನನ್ನೂ, ಔಷಧವನ್ನೂ ತೋರಿಸಿದನು.

ಜಿಂಕೆಯಾದ ಮಿತ್ರನನ್ನು ನೋಡುತ್ತಿದ್ದಂತೆ, ತಾನು ಕೂಡಾ ಜಿಂಕೆಯಾಗಿ ತನ್ನ ಮಿತ್ರನೊಂದಿಗೆ ಆಡಬೇಕೆಂದು ರಾಜಕುಮಾರನಿಗೆ ತೀವ್ರವಾದ ಕೋರಿಕೆಯುಂಟಾಯಿತು. ಪ್ರವರನು ಯಾವುದಕ್ಕೋ ಒಳಗೆ ಹೋಗಿದ್ದುದರಿಂದ ಅವನನ್ನು ತಡೆಯುವವರಿರಲಿಲ್ಲ. ಅಂತೆಯೇ ಅವನು ಅಲ್ಲಿದ್ದ ಔಷಧವನ್ನೆತ್ತಿ ಜಿಂಕೆಯನ್ನು ನೆನೆಯುತ್ತ ಕುಡಿದು ಜಿಂಕೆಯಾಗಿಬಿಟ್ಟನು. ಅದನ್ನು ನೋಡಿ ದೂರದಲ್ಲಿದ್ದ ಸೇವಕರು ಓಡಿಬಂದು ಜಿಂಕೆಯಾದ ರಾಜಕುಮಾರನನ್ನು ಕರೆದುಕೊಂಡು ರಾಜನ ಬಳಿಗೆ ಒಯ್ದು, ನಡೆದ ಸಂಗತಿಯನ್ನು ಹೇಳಿದರು.

ತನ್ನ ಮಗನೇ ಜಿಂಕೆಯಾಗಿಹೋದುದನ್ನು ನೋಡಿ ರಾಜನಿಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದ ಹಾಗಾಯಿತು. ಅವನು ಜಂಬಕ್ಕೆ ಕೋಸಲರಾಜನನ್ನು ಜಯಿಸುವೆನೆಂದು ಹೇಳಿದನೇ ಹೊರತು ಕೋಸಲ ರಾಜನನ್ನು ಜಯಿಸುವ ಶಕ್ತಿ ಅವನಿಗಿರಲಿಲ್ಲ. ಅವನನ್ನು ಸೆರೆಹಿಡಿಯುವ ಮಾತು ಹಾಗಿರಲಿ, ಕೋಸಲದ ಸೈನ್ಯವನ್ನು ಯುದ್ಧದಲ್ಲಿ ಎದುರಿಸುವ ಶಕ್ತಿಕೂಡಾ ವಿದರ್ಭ ರಾಜನಿಗಿರಲಿಲ್ಲ.

ಪ್ರವರನ ಮಗನು ಜಿಂಕೆಯಾಗಿ ಮಾರ್ಪಟ್ಟಾಗ ಏನೂ ಸಂಕಟವಾಗದಿದ್ದ ರಾಜನಿಗೆ, ತನ್ನ ಮಗನೇ ಹಾಗಾದ ಕೂಡಲೇ ಪ್ರತಿರೋಧದ ಔಷಧಕ್ಕಾಗಿ ಅವಸರಪಡಿಸಲೇ ಬೇಕಾಯಿತು. ತನಗೂ ಐವತ್ತು ವರ್ಷ ಪ್ರಾಯ ದಾಟಿದುದನ್ನು ನೆನೆದನು. ತನ್ನದೂ ರಾಜವಂಶವೇ. ಕೂಡಲೇ ರಾಜನು ತನ್ನ ಬಲದ ಕಣ್ಣನ್ನೇ ಕಿತ್ತು ಪ್ರವರನಿಗೆ ಕೊಟ್ಟುಬಿಟ್ಟನು.

ಪ್ರವರನು ಬೇಗನೇ ಪ್ರತಿರೋಧ ರಸಾಯನವನ್ನು ತಯಾರಿಸಿ, ತನ್ನ ಮಗನಿಗೂ ರಾಜನ ಮಗನಿಗೂ ನಿಜರೂಪ ಬರುವ ಹಾಗೆ ಮಾಡಿದನು. ಜಂಭ ಹೇಳಿಕೊಂಡುದಕ್ಕೆ ರಾಜನು ಕಡೆತನಕ ಒಕ್ಕಣ್ಣನಾದ.





# ಮೂಲ್ಯತೆ

ಹಿಂದೆ ವಿಜಯನಗರವನ್ನು ಪಾಲಿಸಿದ ಶ್ರೀಕೃಷ್ಣ ದೇವರಾಯನು, ಭೋಜರಾಜನಂತೆಯೇ ಸಾಹಿತ್ಯ ಪ್ರಿಯನಾಗಿ, ಕವಿ ಪಂಡಿತರಿಗೆಲ್ಲ ಪೋಷಕನಾಗಿದ್ದ.

ಅದೇ ವಿಜಯನಗರ ರಾಜಧಾನಿಯ ಒಂದು ಮೂಲೆಯಲ್ಲಿ ಸೋಮಶರ್ಮನೆಂಬ ಒಬ್ಬ ಸಾಮಾನ್ಯ ಪಂಡಿತನಿದ್ದ. ಅವನಲ್ಲಿ ಹೇಳಿಕೊಳ್ಳ ತಕ್ಕಷ್ಟು ದೊಡ್ಡ ಪಾಂಡಿತ್ಯವಿಲ್ಲದಿದ್ದರೂ, ಹೇಗಾದರೂ ರಾಯನಿಂದ ಬಹುಮಾನ ಪಡೆಯಬೇಕೆಂದು ಆಶೆಯಾಯಿತು. ಅದಕ್ಕಾಗಿ ಅವನು ಬಹಳ ಶ್ರಮಪಟ್ಟು ಕೆಲವು ಪದ್ಯಗಳನ್ನು ಛಂದೋಬದ್ಧವಾಗಿ ರಚಿಸಿ ರಾಯನ ಸಭಾಸ್ಥಾನಕ್ಕೆ ಬಂದನು. ರಾಯನ ಸನ್ನಿಧಿಯಲ್ಲಿ ತಾನೊಬ್ಬ ದೊಡ್ಡ ಕವಿಯೆಂದು ಹೇಳಿಕೊಂಡು, ತಾನು ರಚಿಸಿದ ಪದ್ಯಗಳನ್ನು ಓದಿದನು.

ಕೃಷ್ಣದೇವರಾಯನು ಕವಿಪೋಷಕಮಾತ್ರವಲ್ಲದೆ ಸ್ವತಃ ಕವಿಯೂ ವಿದ್ವಾಂಸನೂ ಆಗಿದ್ದು, ಸೋಮಶರ್ಮನ ಪದ್ಯಗಳಲ್ಲಿ ಯಾವ ಸ್ವಾರಸ್ಯವೂ ಇಲ್ಲವೆಂದು ಗ್ರಹಿಸಿದನು. ಆ ಪದ್ಯಗಳಿಗಾಗಿ ಅವನು ಪಟ್ಟ ಶ್ರಮವೂ ರಾಯನಿಗೆ ಅರ್ಥವಾಯಿತು. ಆದರೂ ಬಡ ಪಂಡಿತನಾದ ಅವನಿಗೆ ಸಾಧಾರಣ ಮೊತ್ತದ ಒಂದು ಬಹುಮಾನ ಕೊಡಿಸಿದನು. ಆದರೆ ಸೋಮಶರ್ಮನು ದೊಡ್ಡ ಬಹುಮಾನವನ್ನೇ ಎದುರು ನೋಡಿದ್ದ. ರಾಯನು ಕೊಡಿಸಿದ ಸಣ್ಣ ಬಹುಮಾನ ನೋಡಿ ಅವನಿಗೆ ಸಿಟ್ಟು ಬಂತು. ಕೃಷ್ಣ ದೇವರಾಯನು ಪಕ್ಷಪಾತ ಬುದ್ಧಿಯ ರಾಜನೆಂದು ಸಮೀಪದಲ್ಲಿದ್ದವರೊಡನೆ ಹೇಳಿದ. ತನ್ನ ಪದ್ಯಗಳಿಗೂ ದೊಡ್ಡ ಬಹುಮಾನ ಪಡೆದ ಪಂಡಿತರ ಪದ್ಯಗಳಿಗೂ ಏನು ವ್ಯತ್ಯಾಸವಿದೆ? ಪದ್ಯಗಳೆಲ್ಲ ಸರಿಸಮಾನತಾನೆ? ಎಂದು ನಿಂದನೆಯ ಪ್ರಶ್ನೆಗಳನ್ನು ಹಾಕಿಕೊಂಡು ಅಲ್ಲಿಂದ ಹೊರಟುಹೋದ. ಇದು ರಾಯನಿಗೂ ಗೊತ್ತಾಯಿತು. ಸೋಮಶರ್ಮನ ಮನಸ್ಸು ನೊಂದುದನ್ನು ನೋಡಿ ರಾಯನಿಗೂ ಬಹಳ ನೋವಾಯಿತು. ಅದನ್ನು ಗಮನಿಸಿ ಅಲ್ಲಿಯೇ ಇದ್ದ ಮಹಾಮಂತ್ರಿ ತಿಮ್ಮರಸು ರಾಯನ ಹತ್ತಿರ ರಹಸ್ಯವಾಗಿ ಏನನ್ನೋ ಹೇಳಿ ಸಮಾಧಾನಪಡಿಸಿದನು.

ಮರುದಿನ ಸೋಮಶರ್ಮ ತನ್ನ ಮನೆಯಲ್ಲಿ ಕುಳಿತಿದ್ದ. ಆಗ ಪಟ್ಟೆ ಸೀರೆಗಳನ್ನು ಮಾರುವ ವರ್ತಕರಿಬ್ಬರು ಅವನ ಬಳಿಗೆ ಬಂದು, ತಮ್ಮ ಗಂಟನ್ನಿಳಿಸಿ, "ಒಳ್ಳೊಳ್ಳೆ ಸೀರೆಗಳಿವೆ. ತೆಗೆದುಕೊಳ್ಳುವಿರಾ?"

ಕೋಲಾರ ಕೃಷ್ಣಅಯ್ಯರ್

ಎಂದು ಕೇಳಿದರು. ಸೋಮಶರ್ಮನ ಹೆಂಡತಿ ಪಟ್ಟೆಯ ಸೀರೆ ಕೊಂಡುಕೊಳ್ಳಬೇಕೆಂದು ಎಂದಿನಿಂದಲೋ ಹೇಳುತ್ತಿದ್ದಳು. ಅಂತೆಯೇ ಸೋಮಶರ್ಮನು ಅವಳಿಗಾಗಿ ವರ್ತಕರನ್ನು ಒಳಗೆ ಕರೆದು ಕುಳ್ಳಿರಿಸಿ ಸೀರೆಗಳನ್ನು ತೋರಿಸಲು ಹೇಳಿದನು. ಅವುಗಳಲ್ಲಿ ಅರಸಿನ ಬಣ್ಣದ ಒಂದು ಸೀರೆ ಸೋಮಶರ್ಮನ ಹೆಂಡತಿಗೆ ಹಿಡಿಸಿತು. ಆದರೆ ಸೋಮಶರ್ಮನಿಗೆ ಗುಲಾಬೀ ಬಣ್ಣದ ಸೀರೆ ಹಿಡಿಸಿತ್ತು. ನೋಡಲಿಕ್ಕೂ ಗುಲಾಬೀ ರಂಗಿನ ಸೀರೆ ಕಣ್ಣಿಗೆ ಹೊಡೆಯುವ ಹಾಗೆ ಬಹಳ ಅಬ್ಬರವಾಗಿತ್ತು. ಸೋಮಶರ್ಮ ಅವೆರಡರ ಬೆಲೆಯನ್ನೂ ಕೇಳಿದ.

ಯಾವ ಸೀರೆಗಾದರೂ ನೂರು ನಾಣ್ಯಗಳೇ ಬೆಲೆ ಎಂದು ವರ್ತಕರು ಹೇಳಿದರು. ಸೋಮಶರ್ಮನಿಗೆ ಆ ಮಾತು ಕೇಳಿ ಆಶ್ಚರ್ಯವಾಯಿತು. ಅವನು ಗುಲಾಬೀ ಬಣ್ಣದ ಸೀರೆಗೆ ಬೆಲೆ ಹೆಚ್ಚಿಗೆ ಇದ್ದೀತೆಂದು ಅಂದುಕೊಂಡಿದ್ದ.

ಸೋಮಶರ್ಮನ ಹೆಂಡತಿ ಗಂಡನನ್ನು ಕುರಿತು ಗುಟ್ಟಿನಲ್ಲಿ, "ಈ ವರ್ತಕರು ಮೋಸ ಮಾಡುತ್ತಾರೆ. ಅರಸಿನ ಬಣ್ಣದ ಸೀರೆ ನಿಜವಾದ ಪಟ್ಟೆಯಿಂದಲೇ ನೇಯ್ದುದು. ಗುಲಾಬೀ ಬಣ್ಣದ ಸೀರೆ ನಾರು ಪಟ್ಟೆಯಿಂದ ನೇಯ್ದಿದ್ದಾರೆ. ಸೀರೆಗಳ ಸಮಾಚಾರ ನಿಮಗೇನು ಗೊತ್ತಿದೆ?" ಎಂದಳು.

ಅದನ್ನು ಕೇಳಿ ಸೋಮಶರ್ಮ ವರ್ತಕರೊಂದಿಗೆ, "ಇದೆಂತಹ ಅನ್ಯಾಯ? ನಿಜವಾದ ಪಟ್ಟೇ ಸೀರೆಯ ಬೆಲೆಯೂ, ನಾರು ಪಟ್ಟೆಯ ಬೆಲೆಯೂ ಒಂದೇ ಹೇಗಾದೀತು?" ಎಂದು ಕೇಳಿದ.

ಅದಕ್ಕೆ ವರ್ತಕರು, "ಸೋಮಶರ್ಮರವರೇ, ನಿನ್ನೆತಾನೇ ನೀವು ನಮ್ಮ ರಾಯರ ಆಸ್ಥಾನದಲ್ಲಿ ಯಾವ ಪದ್ಯವಾದರೂ ಒಂದೇತಾನೇ, ಬಹುಮಾನದಲ್ಲಿ ವ್ಯತ್ಯಾಸವೇಕೆ ಎಂದು ರಾಯರನ್ನು ನಿಂದಿಸಿದಿರಲ್ಲಾ? ಹಾಗೆಯೇ ಯಾವ ಸೀರೆಯಾದರೂ ಒಂದೇ ಆಗಬಾರದೆ"? ಎಂದು ಕೇಳಿದರು.

ಈ ಮಾತು ಕೇಳಿದ ಕೂಡಲೇ ಸೋಮಶರ್ಮನಿಗೆ ಮುನ್ನಾದಿನ ತಾನು ರಾಜಾಸ್ಥಾನದಲ್ಲಿ ನಡೆದುಕೊಂಡ ರೀತಿಯನ್ನು ನೆನೆದು ನಾಚಿಕೆಯಾಯಿತು. ಆ ಸಂಗತಿ ಈ ವರ್ತಕರಿಗೆ ಹೇಗೆ ತಿಳಿಯಿತೆಂದು ಅವನು ಆಶ್ಚರ್ಯಪಡುತ್ತಿರುವಾಗ, ವರ್ತಕರು ತಮ್ಮ ಮುಂಡಾಸು ಮುಂತಾದ್ದನ್ನು ತೆಗೆದುಹಾಕಿ ನಿಜಸ್ವರೂಪ ತೋರಿಸಿದರು. ಕೂಡಲೇ ಸೋಮಶರ್ಮ ರಾಯ. ಮಂತ್ರಿಗಳ ಕಾಲಿಗೆ ಬಿದ್ದು ನಮಸ್ಕರಿಸಿ ತನ್ನ ದುಡುಕಿನ ಅಪರಾಧಕ್ಕೆ ಕ್ಷಮೆ ಕೇಳಿದ. ವಿಶಾಲ ಹೃದಯದ ಕೃಷ್ಣದೇವರಾಯನು ಪಟ್ಟೆಯ ಸೀರೆಯನ್ನು ಸೋಮಶರ್ಮನ ಹೆಂಡತಿಗೆ ಬಹುಮಾನವಿತ್ತು, ತಿಮ್ಮರಸನೊಂದಿಗೆ ಹೊರಟುಹೋದನು.





# ಅಮರವಾಣಿ

ನ ಕರ್ತಾ ಕಸ್ಯಚಿತ್ಕಶ್ಚಿ
ನ್ನಿಯೋಗೇ ಚಾಪಿನೇಶ್ವರಃ
ಸ್ವಭಾವೇ ವರ್ತತೇ ಲೋಕಃ
ತಸ್ಯಕಾಲಃ ಪರಾಯಣಮ್ ೧.

ಯಾರೂ ಯಾವುದಕ್ಕೂ ಕರ್ತರಲ್ಲ; ಯಾರೂ ಯಾರನ್ನೂ ಪ್ರೇರೇಪಿಸಲು ಸಮರ್ಥರಲ್ಲ; ಲೋಕ ಸ್ವಭಾವವನ್ನನುಸರಿಸಿ ಎಲ್ಲಾ ನಡೆಯುತ್ತವೆ. ಕಾಲವೇ ಎಲ್ಲಕ್ಕೂ ಪ್ರಧಾನ.

ನ ಕಾಲಃ ಕಾಲಮತ್ಯೇತಿ
ನ ಕಾಲಃ ಪರಿಹೀಯತೇ
ಸ್ವಭಾವಂ ಚ ಸಮಾಸಾದ್ಯ
ನ ಕಶ್ಚಿದತಿ ವರ್ತತೇ ೨.

ಕಾಲವು ಸ್ವತಂತ್ರವಾದುದು; ಅದು ಯಾವುದಕ್ಕೂ ಒಳಪಡದು; ಅದನ್ನು ಅತಿಕ್ರಮಿಸಲು ಯಾರಿಗೂ ಸಾಧ್ಯವಿಲ್ಲ.

ನ ಕಾಲಸ್ಯಾಸ್ತಿ ಬಂಧುತ್ವಂ
ನ ಹೇತುರ್ನ ಪರಾಕ್ರಮಃ
ನ ಮಿತ್ರಜ್ಞಾತಿ ಸಂಬಂಧಃ
ಕಾರಣಂ ನಾತ್ಮನೋ ವಶಃ ೩.

ಕಾಲಕ್ಕೆ ಬಂಧುತ್ವವಿಲ್ಲ; ಪರಾಕ್ರಮ, ಮಿತ್ರ, ಜ್ಞಾತಿ ಸಂಬಂಧಗಳನ್ನೂ ಅದು ನೋಡದು; ಅದು ಸ್ವತಂತ್ರವಾದುದು.

ಕಾಲ

Photo by Prasad



ಬಹುಮಾನ
ಪಡೆದ ಶೀರ್ಷಿಕೆ

**ಭಾರಕ್ಕೆ ಬಾಗಲಾರೆ**

ಕಳುಹಿಸಿದವರು :
ಕೆ. ಆರ್. ರಾಜೇಶ್ವರಿ

Photo by Bishan Maheshwari



೬೧೯, (ಆರ್) ಸೆಕೆಂಡ್
ಬ್ಲಾಕ್, ೫೬೦ ೦೧೦

ಬಿಸಿಲಿಗೆ ನಡೆಯಲಾರೆ

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦





★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಮೇ ೧೫ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಶೀರ್ಷಿಕೆಗಳನ್ನು ಕಾರ್ಡಿನಲ್ಲೇ ಬರೆಯಬೇಕು. ಗೆದ್ದ ಶೀರ್ಷಿಕೆಗಳು ಜುಲೈ ೧೫ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು :



ಎರಡನೇ ಹೊದಿಕೆಯ ಚಿತ್ರ:
**ರಬ್ಬರು ಬೊಂಬೆ**

ಮೂರನೇ ಹೊದಿಕೆಯ ಚಿತ್ರ:
**ಎಲೆಗಳ ಬೊಂಬೆ**


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications,



# ಅವಳಿ ಮಕ್ಕಳ ಕಥೆ

೧೦

May 1975

[ಗಡ್ಡದ ಮಾಂತ್ರಿಕನ ಬಳಿಗೆ ಹೋದ ರಾಕ್ಷಸನು, ಯಾರೋ ಹೊಸ ಯುವಕರಿಬ್ಬರು ತನ್ನನ್ನು ಗೋಚರಪಡಿಸಿದರೆಂದು ತಿಳಿದು ಅವಸರದಿಂದ ಹಿಂದಿರುಗಿದ. ಅಷ್ಟರೊಳಗೆ ಸುಹಾಸಿನಿಯ ಸಹಾಯದಿಂದ ಸಂಧ್ಯಾ ನಿಶೀಥರು ತಮ್ಮ ನಿಜರೂಪವನ್ನು ಪಡೆದಿದ್ದರು. ಮೂವರು ಸಹೋದರರೂ ರಾಕ್ಷಸನ ರಹಸ್ಯ ಸ್ಥಾನಕ್ಕೆ ಹೋಗುವ ಉಪಾಯವನ್ನು ಹುಡುಕತೊಡಗಿದರು.]

ತನ್ನ ಬಳಿಯಲ್ಲಿರುವ ಮಾಯಾ ಭಸ್ಮಗಳೂ ಅಸ್ತ್ರಗಳೂ ದೊಡ್ಡ ರಾಕ್ಷಸನ ನಿವಾಸಸ್ಥಾನದಲ್ಲಿ [illegible] ಪ್ರಭಾವವನ್ನೂ ಬೀರಲಾರವೆಂದು ತಿಳಿ[illegible] ತ್ರಿವಳಿ ಸಹೋದರರಿಗೆ ಏನೂ ತೋರದೆ ಹೋಯಿತು. ಮೂಕರಂತಾಗಿ ಸ್ವಲ್ಪ ಹೊತ್ತು ಒಬ್ಬರಿಗೆ ಮುಖ ಮುಖ ನೋಡುತ್ತ ನಿಂತು ಬಿಟ್ಟರು. ತಾವು ಈ ಹುಡುಗಿಯರ ಮುಂದೆ [illegible]ಕರಾದೆವಲ್ಲಾ ಎಂಬ ಭಾವನೆಯಿಂದ ಅವರಿಗೆ ಕುಸು ನಾಚಿಕೆಯೂ ಆಯಿತು. ನಿಶೀಥನಿಗೆ ಒಂದು ಸಂದೇಹವೂ ಬಂತು: "ಹೌದು. ಈ ರಾಕ್ಷಸನಿಗೆ ಪ್ರಪಂಚದೊಳಗೆ ಎಲ್ಲೆಲ್ಲಿ ಅವಳಿ ಜವಳಿಗಳು ಹುಟ್ಟಿದ್ದಾರೆಂಬುದನ್ನು ಹುಡುಕು ವುದೇ ಕೆಲಸವಾಗಿದ್ದರೆ, ನಾವು ಹುಟ್ಟಿ ಬೆಳೆದು ಇಷ್ಟು ದೊಡ್ಡವರಾಗುವವರೆಗೂ ಅವನು ನಮ್ಮ ತಂಟೆಗೆ ಬಾರದೆ ಸುಮ್ಮನಿರಲು ಕಾರಣವೇನು?" ಮೂವರೂ ಪಿಸುದನಿಯಿಂದ ತಮ್ಮ ಈ ಸಂದೇಹ ವನ್ನು ತಮ್ಮೊಳಗೆ ಕೇಳಿಕೊಂಡರು.

ಮರುದಿನ ಉದಯನನು ತಮ್ಮ ಈ ಸಂದೇಹ ವನ್ನು ಕುರಿತು, ಅವಳಿ ರಾಜಕುಮಾರಿಯರೊಂದಿಗೆ ಹೇಳಿದನು. ಅವರಿಗೂ ಆ ವಿಷಯದಲ್ಲಿ ಆಶ್ಚರ್ಯ



ವಾಯಿತು. "ಹೌದಲ್ಲ. ನಿಮ್ಮ ಸಂದೇಹವು ಯಥಾರ್ಥವಾಗಿದೆ. ಅವನಿಗೆ ನಿಮ್ಮ ಹುಟ್ಟು ಗೊತ್ತಾಗದಿರಲು ಸಾಧ್ಯವಿಲ್ಲ. ಬಹುಶಃ ಒಂದು ಕಾರಣದಿಂದ ಅವನು ನಿಮ್ಮ ತಂಟೆಗೆ ಬರಲಿಲ್ಲವೋ ಏನೋ? ಆ ಕಾರಣ..." ಎಂದು ಸುಭಾಷಿಣಿ ತನ್ನ ಮಾತನ್ನು ನಿಲ್ಲಿಸಿ ಮೂವರು ಸಹೋದರರನ್ನು ಪರೀಕ್ಷಿಸಿ ನೋಡತೊಡಗಿದಳು. ಅದನ್ನು ನೋಡಿ ಮೂವರಿಗೂ ಇನ್ನಿಷ್ಟು ಕೌತುಕವೆನಿಸಿತು.

"ಹೇಳು, ಶಂಕಿಸಬೇಡ. ನೀನು ಊಹಿಸುವ ಕಾರಣವು ನಿಜವಾಗಿದ್ದರೆ ನಾವು ತಕ್ಕ ಜಾಗ್ರತೆ ತೆಗೆದು ಕೊಳ್ಳಬಹುದಷ್ಟೆ?" ಎಂದ ನಿಶೀಥ.

ಆಗ ಸುಭಾಷಿಣಿ, "ಮತ್ತೇನಿಲ್ಲ, ನಿಮಗೇನಾದರೂ ಅಂಗ ಲೋಪವಿದೆಯೋ ಎಂದು ನೋಡುತ್ತಿದ್ದೇನೆ. ಯಾವುದೊಂದು ಪುಟ್ಟ ಅಂಗ ಲೋಪವಿದ್ದರೂ ಅಂತಹ ಅವಳಿಜವಳಿಗಳು ಈ ರಾಕ್ಷಸನ ಬಲಿಗೆ ಉಪಯೋಗವಿಲ್ಲವಂತೆ. ಬಲಿಗಾಗಿ ಹುಡುಕುವಾಗ ಈ ವಿಷಯವನ್ನು ಅವನು ಚೆನ್ನಾಗಿ ಪರಿಶೀಲಿ ತ್ತಾನೆ. ಆದರೆ ನಿಮ್ಮಲ್ಲಿ ಅಂತಹ ಯಾವ ಅ ಲೋಪವೂ ಇರುವಂತೆ ನನಗೆ ಕಾಣುವುದಿಲ್ಲ. ಅ ನನಗೂ ಆಶ್ಚರ್ಯವಾಗಿದೆ" ಎಂದಳು.

ಈ ಮಾತು ಕೇಳಿದ ಕೂಡಲೇ, ಮೂವ ಸಹೋದರರೂ ಒಂದೇ ಬಾಯಿಗೆ "ಹಾಗಾ ಸರಿ! ನಾವು ಮೂವರೂ ಒಂದೊಂದು ಲೋಪವ ಇದ್ದೆವು" ಎಂದರು.

ಆಮೇಲೆ ಉದಯನನು ಹುಟ್ಟಿದಂದಿನಿಂದ ತವ ದೃಷ್ಟಿಗಳಲ್ಲಿ ಎಂತಹ ಲೋಪವಿತ್ತೆಂಬುದನ್ನೂ, ಕ ಆ ಗಡ್ಡದ ಮಾಂತ್ರಿಕನ ಪುಣ್ಯದಿಂದ ಆ ಲೋ ಈಗ ಪೂರ್ತಿ ತೊಲಗಿದುದನ್ನೂ ರಾಜಕುಮಾ ಯರಿಗೆ ವಿವರಿಸಿ ಹೇಳಿದನು.

ಹೀಗೆ ಅವರು ಮಾತಾಡಿಕೊಳ್ಳುತ್ತಿದ್ದಾಗ ದೊಡ್ಡ ರಾಕ್ಷಸನು ಬರುವ ಸೂಚನೆಯಾ ರೊಯ್ಯನೆ ಬಿರುಗಾಳಿ ಎದ್ದು ಅವರನ್ನು ನಡುಗಿಸಿ ರಾಜಕುಮಾರಿಯರು ಮೂವರೂ ಕೈ ಕೈ ಹಿಡಿ ಕೊಂಡು ಕೊಳದೊಳಗೆ ಹಾರಿ ಮರುಕ್ಷಣ ಹಂಸಗಳಾಗಿ ತೇಲಿದರು.

ಆದರೆ ತ್ರಿವಳಿ ಸಹೋದರರು ಮಾತ್ರ ಈಸ ತಪ್ಪಿಸಿಕೊಳ್ಳಲಾರದೆ ಹೋದರು. ಉದಯನ ಬೇಗಬೇಗನೆ ತನ್ನ ಜೇಬಿನಿಂದ ಭಸ್ಮಗಳ ಡಬ್ಬಿಗಳ ತೆಗೆದು ಯಾವ ಭಸ್ಮವೆಂದು ನೋಡುವುದರೊ ರಾಕ್ಷಸನು ಬಂದು ಹದ್ದಿನ ದೃಷ್ಟಿಯಿಂದ ಅವರ ನೋಡಿ ಗಬಕ್ಕನೆ ಮುಷ್ಟಿ ಚಾಚಿ ಕೋಳಿಮರಿಯ ಹದ್ದು ಹಿಡಿಯುವಂತೆ ಮೂವರನ್ನೂ ಹಿಡಿದುಬಿ ಮೂವರೂ ಕಿಟಾರನೆ ಕಿರುಚಿಕೊಂಡರು.

ರಾಕ್ಷಸನು ಹಿಡಿದು ಒತ್ತುತ್ತಿದ್ದರೆ ಅವರ ಮುಗಿದೇ ಹೋಗಬೇಕಿತ್ತು. ಆದರೆ ಅವನು ಒತ್ತಲಿ ತಮ್ಮ ದೇಹಕ್ಕೆ ಯಾವ ಗಾಯವೂ ಆಗದ ಮೆತ್ತಗೆಯೇ ಹಿಡಿದಿದ್ದಾನೆಂಬುದನ್ನು ನೆನೆಯುವಾ

ಅವರಿಗೂ ಧೈರ್ಯ ಬಂದಿತು. ಅಷ್ಟರಲ್ಲಿ ರಾಕ್ಷಸನು ಅವರನ್ನು ಕುರಿತು, "ಎಳೇ ಪೋರರು! ಯಾರು ನೀವು ? ಈ ನನ್ನ ರಹಸ್ಯ ಪ್ರದೇಶಕ್ಕೆ ನೀವು ಹೇಗೆ ಬಂದಿರಿ ? ಎಲ್ಲಿಂದ ಬಂದಿರಿ ? ಏತಕ್ಕಾಗಿ ಬಂದಿರಿ ? ಸತ್ಯವಾದುದನ್ನೆ ಹೇಳಬೇಕು. ಸುಳ್ಳು ಸುಳ್ಳು ಹೇಳಿದರೆ ಇದಕ್ಕೆ ಮೊದಲು ಇಲ್ಲಿಗೆ ಬಂದವರ ಗತಿ ಏನಾಯಿತೋ ಅದೇ ನಿಮಗೂ ಆಗುತ್ತದೆ. ಜೋಕೆ. ಧೈರ್ಯದಿಂದ ಬಾಯಿ ಬಿಡಿರಿ" ಎಂದ ಸಿಡಿಲಿನಂತಹ ಗರ್ಜನೆಯ ದನಿಯಿಂದ.

ಅದಕ್ಕೆ ಉದಯನನು "ಹೌದು ಹೌದು. ನಾವು ಇಲ್ಲಿಗೆ ಬರುವುದೇ ಬೇಡಿತ್ತು. ಈ ಸ್ಥಳವು ಬಹಳ ಅಪಾಯವೆಂದು ನಮಗೇನು ಗೊತ್ತು ? ನಾವೇನು ಮಾಡಿದೆವು ? ಯಾರು ಹೇಳಿದರು ? ನೋಡಲಿಕ್ಕೆ ಬಹಳ ರಮ್ಯವಾದ ಸ್ಥಳ. ಹೇಗೂ ನಿನ್ನ ಕೈಗೆ ಸಿಕ್ಕಿಬಿದ್ದಮೇಲೆ ನಿನ್ನ ಇಷ್ಟವೇ ಗೆಲ್ಲುತ್ತೆ ನಿಜ. ಆದರೂ ಏನೂ ಅರಿಯದವರೆಂಬ ನಮ್ಮ ಯಥಾರ್ಥವನ್ನು ಅರಿತು, ನಿನ್ನ ಇಷ್ಟ ಬಂದಹಾಗೆ ಮಾಡಯ್ಯ. ಮಹಾಶಕ್ತನಾದ ನಿನ್ನ ಕೈಯಲ್ಲಿ ನಾವೇನು ಮಾಡಬಲ್ಲೆವು?" ಎಂದನು.

"ಓಹೋ ! ಮೊನ್ನೆ ಹುಟ್ಟಿದ ನಿನಗೆ ಎಷ್ಟೆಲ್ಲ ಕಾನೂನು ! ನೀವುಗಳು ಸಾಧಾರಣದ ಕಿಡಿಗಳಲ್ಲ. ನಿಜ ಹೇಳಿ. ನನ್ನ ತಮ್ಮನಿಗೆ ಟೋಪಿ ಹಾಕಿ ಈಗ ಇಲ್ಲಿಗೆ ಬಂದಿದ್ದೀರಾ ? ಯಾಕೆ ಬಂದಿರಿ ? ಬೇಗ ಬಾಯಿಬಿಡಿ" ಎಂದು ಗದರಿಸಿದ ರಾಕ್ಷಸ.

"ಅಲ್ಲಯ್ಯಾ, ನಮ್ಮನ್ನು ಹೀಗೆ ಗದರಿಸಲಿಕ್ಕೆ ನಾವೇನು ಮಾಡಿಬಿಟ್ಟೆವು ? ಇಷ್ಟು ಸಣ್ಣ ನಮ್ಮಿಂದ ಏನುತಾನೇ ಸಾಧ್ಯವಾದೀತು ? ನಾವೇನೂ ತಪ್ಪು ಮಾಡಲಿಲ್ಲ. ಕಳ್ಳರಲ್ಲ. ಸುಳ್ಳರಲ್ಲ. ನಾವು ಇಲ್ಲಿಗೆ ಬಂದ ಕೆಲಸವೇನಂದರೆ..." ಎಂದು ಉದಯನನು ಹೇಳುವಾಗ, "ಮತ್ತೇನು, ನನಗೆ ಟೋಪಿ ಹಾಕ ಬೇಕೆಂತಲೇ !" ಎಂಬ ಶಬ್ದ ಸಮೀಪದಲ್ಲೇ ಹೊರಟು ಬಂತು.

ಸಹೋದರ ಕುಮಾರರು ಆ ಶಬ್ದ ಬಂದ ದಿಕ್ಕಿಗೆ ತಿರುಗಿ ನೋಡಿದರು. ಮೊತ್ತಮೊದಲು ಅವರು ಯಾರನ್ನು ನೋಡಿ, ಮೋಸದ ಮಾತುಗಳನ್ನು ಹೇಳಿ





ಗಡ್ಡದ ಮಾಂತ್ರಿಕನ ಬಳಿಗೆ ಓಡಿಸಿದ್ದರೋ ಅದೇ ಕಾವಲುಗಾರನಾದ ರಾಕ್ಷಸನು ಅಲ್ಲಿಗೆ ಬಂದಿದ್ದ.

ಆ ರಾಕ್ಷಸನು ದೊಡ್ಡ ರಾಕ್ಷಸನನ್ನು ನೋಡಿ, "ಅಣ್ಣಾ, ಇವರ ಸಮಾಚಾರ ಇನ್ನು ನನಗೆ ಬಿಟ್ಟು ಬಿಡು. ನಿನ್ನ ಕಾಲವು ಅಮೂಲ್ಯವಾದುದು. ನಿನ್ನ ಬೇಟೆಗೆ ನೀನು ಹೋಗಣ್ಣ. ನಾನು ಹುಡುಕುತ್ತಾ ಇದ್ದ ಪಿಳ್ಳೆಗಳು ಸಿಕ್ಕಿದರು. ಇನ್ನು ಬಿಡು." ಎಂದನು.

ತಮ್ಮ ರಾಕ್ಷಸನ ಮಾತಿಗೆ ಅಣ್ಣ ರಾಕ್ಷಸನು ತಲೆ ದೂಗುತ್ತ, "ಹೂಂ. ಈ ಪಿಳ್ಳೆಗಳ ಗೊಡವೆ ನಿನಗೇ ಇರಲಿ. ನಿನಗೆ ಮೋಸ ಮಾಡಿದವರನ್ನು ನೀನೇ ನೋಡಿಕೊಳ್ಳುವುದು ನ್ಯಾಯ. ನೋಡಿಕೋ ತಮ್ಮಾ" ಎಂದು ಹೇಳಿ ಮೂವರನ್ನೂ ಕೆಳಗೆ ಬಿಟ್ಟು ಹದ್ದಿನ ರೂಪದಲ್ಲಿ ಹಾರಿಹೋದನು.

ಆ ಕೂಡಲೇ ತಮ್ಮ ರಾಕ್ಷಸನು ಮೂವರು ಸಹೋದರರನ್ನೂ ಎಳೆದುಕೊಂಡು ತಾನು ಕಾವಲು ಕಾಯುವ ಭವನದೊಳಗೆ ಹೋದನು. ಅಲ್ಲಿಯ ಒಂದು ಹಜಾರದಲ್ಲಿ ಅವರನ್ನು ತನ್ನಿದಿರು ಕುಳ್ಳಿರಿಸಿಕೊಂಡು ಸ್ವಲ್ಪ ಹೊತ್ತು ಅವರ ಮುಖವನ್ನು ನೋಡಿದನು. ಇವರನ್ನು ಹೆದರಿಸಿ ಬೆದರಿಸಿಬಿಟ್ಟರೆ ಪ್ರಾಣ ಬಿಟ್ಟಾರು. ಆದಕ್ಕಿಂತ ಒಳ್ಳೆಯದರಲ್ಲಿ ಮಾತಾಡಿಸಿ, ಇವರ ಕೆಲಸಗಳ ಗುಟ್ಟು ತಿಳಿಯಬೇಕೆಂದು ಬಗೆದು, "ಕಡಲೇಕಾಯಿಗಳಂತಹ ಪುಟಾಣಿಗಳೇ, ನೀವು ನಮ್ಮ ಗಡ್ಡದ ಕುಳ್ಳನಿಗೂ ನನಗೂ ಮೋಸಮಾಡಿದ್ದೀರಿ. ಕಡೆಗೆ ನನ್ನ ಕೈಗೇ ಸಿಕ್ಕಿ ಬಿದ್ದಿದ್ದೀರಿ. ನಿಮ್ಮ ಮಾಯೆ ಮೋಸಗಳೆಲ್ಲ ಇಲ್ಲಿ ನಡೆಯುವುದಿಲ್ಲವೆಂದು ಇದರಿಂದ ತಿಳಿಯಿತಷ್ಟೆ? ಈಗ ಮೊದಲು ನೀವು ವಶಪಡಿಸಿಕೊಂಡ, ಭಸ್ಮ ಅಂಜನ ಕರವಸ್ತ್ರಗಳನ್ನೆಲ್ಲ ತೆಗೆದು ನನ್ನ ಮುಂದೆ ಇಟ್ಟುಬಿಡಿ. ಆಮೇಲೆ ಉಳಿದ ಸಂಗತಿ ಮಾತಾಡೋಣ. ನಾನು ಹೇಳಿದ ಹಾಗೆ ಕೇಳಿದರೆ ನಿಮಗೇನೂ ಭಯವಿಲ್ಲ. ಇಲ್ಲದಿದ್ದರೆ ನನ್ನ ಅಂಗೈಯನ್ನು ನಿಮ್ಮ ತಲೆಗಳ ಮೇಲೆ ಒತ್ತಿಬಿಡುತ್ತೇನೆ. ನೀವು ಭೂಮಿಯೊಳಗೆ ಹುದುಗಿ ಹೋಗುವಿರಿ. ಜೋಕೆ! ಬುದ್ಧಿವಂತರ ಹಾಗೆ ಮಾಡಿಬಿಡಿ." ಎಂದನು.

ಆ ಮಹಾರಾಕ್ಷಸನು ಹೇಳಿದಂತೆ ಕೇಳದೆ ಆ ಸಹೋದರರಿಗೆ ಬೇರೆ ಉಪಾಯವೇನಿದೆ? ಕೂಡಲೇ ಅವರು ತಮ್ಮ ಹತ್ತಿರವಿರುವ ಮಂತ್ರದ ವಸ್ತುಗಳನ್ನೆಲ್ಲಾ ಅವನ ಮುಂದೆ ಇಟ್ಟುಬಿಟ್ಟರು. ರಾಕ್ಷಸನು ಕೋರೆಗಳನ್ನು ತೋರಿಸಿ ನಗುತ್ತ, "ಹಾಗೆ ದಾರಿಗೆ ಬನ್ನಿ. ಈಗ ನೀವು ಬುದ್ಧಿವಂತರು. ನಾನು ಬಹಳ ಕಾಲದಿಂದ ಇಲ್ಲಿ ಕಾವಲು ಕುಳಿತಿದ್ದೇನಾಗಲಿ, ಈವರೆಗೂ ನನ್ನ ಕಣ್ಣು ತಪ್ಪಿಸಿ ಒಳಗೆ ನುಗ್ಗಿದವರಿಲ್ಲ. ಯಾರು ಬಂದರೂ ನನ್ನ ಕೈಗೆ ಸಿಕ್ಕಿ ಶಿಲಾಪ್ರತಿಮೆಗಳಾಗಿ ಹೋಗಿಬಿಡುವರು. ಅಲ್ಲಿ ನೋಡಿದಿರಾ? ಆ ಪ್ರತಿಮೆಗಳೆಲ್ಲಾ ಇಲ್ಲಿಗೆ ಬಂದು ನನ್ನ ಕೈಗೆ ಸಿಕ್ಕಿಬಿದ್ದ ಕಡಲೇಕಾಳುಗಳೇ. ನಿಜ ಹೇಳಬೇಕೆಂದರೆ, ನೀವು ನನಗೆ ಮೋಸ ಮಾಡಿದ ಕ್ಷಣದಿಂದ ನಾನೇನೂ ಹೊಟ್ಟೆಗೆ ಹಾಕಿಕೊಳ್ಳಲಿಲ್ಲ. ಪ್ರಪಂಚವನ್ನೇ ನುಂಗುವಷ್ಟು

ಹಸಿವೆಯಾಗಿದೆ. ಈಗ ನಿಮ್ಮ ಪುಣ್ಯದಿಂದ ಹೊಟ್ಟೆ ತುಂಬ ತಿಂದುಬಿಡುತ್ತೇನೆ. ಉಳಿದ ವಿಷಯ ಆಮೇಲೆ" ಎಂದು ಹೇಳಿ ಮಾಯಾ ಕರವಸ್ತ್ರವನ್ನು ಹಾಸಿ ಸರಿಯಾಗಿ ಕುಳಿತು ಬೇಕಾದ ಆಹಾರಪದಾರ್ಥಗಳನ್ನು ಬಯಸಿದನು.

ಒಂದೊಂದೇ ಭಕ್ಷ್ಯಗಳು ಬರುತ್ತಿದ್ದ ಹಾಗೆ ತಿಂದು ತಿಂದು ತನ್ನ ಹೊಟ್ಟೆಯನ್ನು ತುಂಬಿಸಿಕೊಂಡ ಆ ರಾಕ್ಷಸ. ಆಮೇಲೆ ಮೂವರು ಸಹೋದರರಿಗೂ ತಿನ್ನಲು ಹೇಳಿದ. ಅವರೂ ಸಂತೋಷದಿಂದ ಹೊಟ್ಟೆ ತುಂಬಿಸಿಕೊಂಡರು. ಈ ರಾಕ್ಷಸನು ಎಷ್ಟಾದರೂ ದಯಾವಂತನೇ ಎಂದು ಅವರು ಮನಸ್ಸಿನಲ್ಲೇ ಹೊಗಳಿಕೊಂಡರು.

ಆದರೆ ಹೊಟ್ಟೆಗಳ ಕಾರ್ಯ ಪೂರ್ತಿಯಾದ ಕೂಡಲೇ ಆ ರಾಕ್ಷಸನು, ಮೂವರನ್ನೂ ಒಂದು ಹಗ್ಗದಿಂದ ಕಟ್ಟಿಹಾಕಿ, ನೀರು ಕುಡಿದು ಬರುತ್ತೇನೆಂದು ಹೇಳಿ ಕೊಳದ ಕಡೆಗೆ ಹೋದನು. ಸ್ವಲ್ಪ ಹೊತ್ತಿನ ಮೇಲೆ ಆ ರಾಕ್ಷಸ ಮೂರು ದೊನ್ನೆಗಳಲ್ಲಿ ನೀರು ತೆಗೆದುಕೊಂಡು ಬಂದು ಸಹೋದರರಿಗೂ ಕುಡಿಯಲು ಕೊಟ್ಟನು. ಪುಣ್ಯಾತ್ಮ ರಾಕ್ಷಸ ನೀರು ತಂದು ಕೊಡುವಾಗ ಒಳ್ಳೆಯವನೆಂಬ ಭಾವನೆ ಪುನಃ ಮೂಡಿತು. ಅಷ್ಟರಲ್ಲಿ, ಅಂದರೆ ನೀರು ಅವರ ಹೊಟ್ಟೆಗಿಳಿದ ಕೂಡಲೇ ಕಟ್ಟಿದ ಹಗ್ಗ ಕಡಿದು ಹೋಗಿ ಮೂವರೂ ಮೂರು ಶಿಲಾಪ್ರತಿಮೆಗಳಾದರು ಪಾಪ !

ಆಗ ಆ ರಾಕ್ಷಸನು ಅವರನ್ನು ನೋಡುತ್ತ, ದಿಕ್ಕುಗಳು ಗಡಚಿಕ್ಕುವ ಹಾಗೆ ಹಹ್ಹಾಕಾರದಿಂದ ನಕ್ಕನು. ಹಾಗೆಯೇ ಬಿದ್ದುಬಿದ್ದು ನಗುತ್ತ ಆ ಶಿಲಾಪ್ರತಿಮೆಗಳನ್ನು ಹೊತ್ತುಕೊಂಡು ಹೋಗಿ ತಾನು ಕಾವಲು ಕಾಯುವ ಬಾಗಿಲ ಬದಿಯಲ್ಲಿ ನಿಲ್ಲಿಸಿದನು.

ಅತ್ತ ರಾಜಧಾನಿಯಲ್ಲಿ ದಾನಶೀಲ ಮಹಾರಾಜನು, ತನ್ನ ಪ್ರಿಯ ಕುಮಾರಿಯರನ್ನು ಹುಡುಕಲು ತ್ರಿವಳಿ ಸಹೋದರರನ್ನು ಕಳುಹಿಸಿದ ದಿನವೇ ಒಂದು ಕೆಲಸ ಮಾಡಿದ್ದ. ಕೋಟೆಯ ಮೇಲಿನ ಅಂತಸ್ತಿನಲ್ಲಿ ಚಿತ್ರಮಯವಾದ ಒಂದು ಕೋಣೆಯನ್ನು ಕಟ್ಟಿಸಿ





ಅಲ್ಲೇ ಕುಳಿತುಬಿಟ್ಟಿದ್ದ. ಎತ್ತರವಾದ ಆ ಕೋಣೆಯಲ್ಲಿ ಕುಳಿತು ಸುತ್ತಲೂ ನೋಡಿದರೆ, ಬಹು ದೂರದಲ್ಲಿ ಯಾರು ಬರುತ್ತಿದ್ದರೂ ಕಾಣಿಸುತ್ತದೆ. ದಿನದ ಇಪ್ಪತ್ನಾಲ್ಕು ಗಂಟೆಗಳನ್ನೂ, ಕಣ್ಣು ಕಾಯಿಗಟ್ಟುವಂತೆ ನೋಡುತ್ತಾ ಕಳೆಯುತ್ತಿದ್ದ ಆ ರಾಜ.

ತ್ರಿವಳಿ ಸಹೋದರರು ಹೊರಟುಹೋಗಿ ಐದು ವರ್ಷಗಳು ಕಳೆದುಹೋದುವು. ಇಷ್ಟರವರೆಗೂ ಅವರು ಏನಾದರೆಂಬ ಜಾಡು ಕೂಡ ತಿಳಿಯಲಿಲ್ಲ. ರಾಜನ ಅವಸ್ಥೆ ಹೇಗಿರಬೇಡ ? ಕೇವಲ ಆಶಾವಾದದ ತಂತು ಮಾತ್ರದಿಂದ ಅವನು ಅಷ್ಟರವರೆಗೆ ಇದ್ದಾನೆಂಬುದೂ ಆಶ್ಚರ್ಯವೇ. ಆಗಾಗ ಆಸ್ಥಾನದ ಜ್ಯೋತಿಷ್ಕನನ್ನು ಕರೆಸಿ ಜೋಸ್ಯ ಕೇಳುತ್ತಿದ್ದ. ಜ್ಯೋತಿಷ್ಕನು ಹೇಳುವ ಧೈರ್ಯವೇ ಅವನನ್ನು ಉಳಿಸಿಕೊಂಡಿತ್ತು. "ಕುಮಾರಿಯರು ಎಲ್ಲಿಯೋ ಬದುಕಿರುವುದು ನಿಜ. ಸುಖವಾಗಿಯೇ ಇದ್ದಾರೆ. ಕ್ಷೇಮವಾಗಿ ವಾಪಾಸು ಬರುವುದೂ ಖಂಡಿತ. ನಿರಾಶೆಗೆ ಕಾರಣವಿಲ್ಲ. ಕಾಲವು ಅವಸರವಾಗಿ ಓಡಿ ಬರಲಾರದು. ಅದು ಬರುವವರೆಗೆ ತಾಳ್ಮೆ ಮಾತ್ರ ಗಟ್ಟಿಯಾಗಿರಬೇಕು. ಅಷ್ಟೇ" ಎಂದು ಜ್ಯೋತಿಷ್ಯನು ಹೇಳುತ್ತಿದ್ದ. ರಾಜನೂ ನಂಬಿ ಕಾಯುತ್ತಿದ್ದ.

ಹೀಗಿರುವಾಗ ಒಂದುದಿನ ಬೆಳಗ್ಗಿನ ಬಿಳಿ ಮಸುಕು ಹೊತ್ತಿನಲ್ಲಿ ದೂರದಲ್ಲಿ ಎರಡು ಕುದುರೆಗಳು ಶರ ವೇಗದಲ್ಲಿ ಅರಮನೆಯ ಕಡೆಗೆ ಬರುತ್ತಿರುವುದನ್ನು ನೋಡಿ, ರಾಜನ ಹೃದಯವೇ ಕಣ್ಣಿಗೆ ಬಂದಿತು. ಆ ಕುದುರೆಗಳ ಬಣ್ಣ, ಅವುಗಳ ಮೇಲೆ ಕುಳಿತ ಮನುಷ್ಯರ ಆಕಾರಗಳು, ಕುದುರೆಗಳ ತಲೆಗೆ ಕಟ್ಟಿರುವ ಕಪ್ಪು ಜಂಡಾಗಳು, ಇಷ್ಟು ಕಂಡ ಕೂಡಲೇ ರಾಜನು "ಹಾ !" ಎಂದು ಕೂಗಿ ನಡುಗುವ ಕೈಯಿಂದ ಕತ್ತಿಯನ್ನೆತ್ತಿ ತನ್ನ ಎದೆಗೆ ಚುಚ್ಚಿಕೊಳ್ಳಲು ನೋಡಿದನು. ಅಷ್ಟರೊಳಗೆ ರಾಜನ ಕೂಗು ಕೇಳಿ ಗಾಬರಿಯಾಗಿ ಸೇವಕರು ಬಂದು ಸೇರಿದುದರಿಂದ ರಾಜನು ಉಳಿದನು. ಆದರೆ ಸ್ಮೃತಿತಪ್ಪಿ ನೆಲದಮೇಲೆ ಬಿದ್ದುಬಿಟ್ಟನು. ಅವನ ಶರೀರವೆಲ್ಲ ಬೆವರಿಹೋಗಿತ್ತು. ಇದ್ದಕ್ಕಿದ್ದಹಾಗೆ ರಾಜನಿಗೆ ಏನಾಯಿತು ?

ಸೇವಕರ ಶೈತ್ಯೋಪಚಾರಗಳಿಂದ, ರಾಜನಿಗೆ ಎಚ್ಚರ ಬರುವುದಕ್ಕೂ, ಆ ಕುದುರೆಗಳೆರಡೂ ಅಲ್ಲಿಗೆ ಬಂದು ಸೇರುವುದಕ್ಕೂ ಸರಿಹೋಯಿತು. ರಾಜನು ಸೇವಕರ ಸಹಾಯದಿಂದ ಕೆಳಗೆ ಬಂದು, ಆ ಕುದುರೆಗಳನ್ನು ನೋಡಿದ.

ತಾನು ತ್ರಿವಳಿ ಸಹೋದರರಿಗೆ ಕೊಟ್ಟ ಕುದುರೆಗಳೇ ಅವುಗಳು. ಆದರೆ ಅವುಗಳ ಮೇಲೆ ಬಂದವರು ಆ ಸಹೋದರರಲ್ಲ; ತನ್ನ ಸೇವಕರಿಬ್ಬರು. ಹಾಗಾದರೆ ಆ ಸೋದರರ ಗತಿ ಏನು ? ಇನ್ನೊಂದು ಕುದುರೆ ಎಲ್ಲಿ? ಇವರೇನು ಭಯಂಕರ ವಾರ್ತೆ ತಂದರೋ ? ರಾಜನು ಅವರಿಬ್ಬರನ್ನೂ ಪಿಳಿಪಿಳಿ ನೋಡುತ್ತ, "ಕುಮಾರಿಯರೆಲ್ಲಿ ? ಆ ಸಹೋದರ ಹುಡುಗರೆಲ್ಲಿ ? ಈ ಎರಡು ಕುದುರೆಗಳು ನಿಮಗೆಲ್ಲಿ

ಸಿಕ್ಕಿದುವು ? ಒಳ್ಳೆಯ ಸಮಾಚಾರವೇನಾದರೂ ತಂದಿದ್ದೀರಾ ? '' ಎಂದು ಆತುರದಿಂದ ಪ್ರಶ್ನೆಗಳ ಮೇಲೆ ಪ್ರಶ್ನೆ ಮಾಡಿದನು.

ಸೇವಕರಿಬ್ಬರೂ ರಾಜನಿಗೆ ಕೈಮುಗಿದು, '' ಮಹಾ ಪ್ರಭುಗಳೇ, ನಮ್ಮನ್ನು ಕ್ಷಮಿಸಬೇಕು. ಕುಮಾರಿಯರ ಸಮಾಚಾರವಾಗಲಿ, ಅವರನ್ನು ಹುಡುಕಲು ಹೋದ ಕುಮಾರರ ಸಂಗತಿಯಾಗಲಿ ನಮಗೆ ತಿಳಿಯದು. ನಾವು ಎಲ್ಲಾ ಕಡೆಗಳಲ್ಲಿಯೂ ಬಹಳ ಎಚ್ಚರಿಕೆಯಿಂದ ಹುಡುಕಿಕೊಂಡು ಹೋಗುತ್ತಿರುವಾಗ, ಒಂದಾನೊಂದು ಮೈದಾನ ಪ್ರದೇಶದಲ್ಲಿ ಈ ಕುದುರೆಗಳನ್ನು ನೋಡಿದೆವು. ಇವುಗಳ ಗುರುತು ಹಿಡಿದೆವು. ಅವರಾರಾದರೂ ಸಮೀಪದಲ್ಲಿರುವರೇನೋ ಎಂದು ನಮ್ಮಿಂದ ಸಾಧ್ಯವಾದಷ್ಟು ಹುಡುಕಿ ನೋಡಿದೆವು. ಒಂದುವೇಳೆ ಮನೆಗೆ ಬಂದಿರುವರೇನೋ ಅನಿಸಿತು. ಇಷ್ಟಾದರೂ ಒಂದು ಸಮಾಚಾರ ತಮಗೆ ತಿಳಿಸೋಣವೆಂದು ಈ ಕುದುರೆಗಳನ್ನು ತೆಗೆದುಕೊಂಡು ಬಂದೆವು. ಬೇರೇನೂ ಅರಿಯೆವು.'' ಎಂದು ದುಃಖದಿಂದಲೇ ಬಿನ್ನವಿಸಿಕೊಂಡರು.

'' ಅಯ್ಯೋ ! ಇಷ್ಟೇನಾ ನನ್ನ ಅದೃಷ್ಟ ? ಎಂದು ರಾಜನು ಆರ್ತನಾದ ಮಾಡಿ ಹಣೆ ಬಡೆದುಕೊಂಡು ಮತ್ತೆ ದುಃಖದಲ್ಲಿ ಮುಳುಗಿದನು. ಮಂತ್ರಿ ಜ್ಯೋತಿಷ್ಯ ಮುಂತಾದವರು ಸಾಧ್ಯವಾದಷ್ಟು ರಾಜನಿಗೆ ಸಮಾಧಾನ ಹೇಳಿದರು. ರಾಜನು ಸಮಾ ಧಾನಕ್ಕೆ ಬಂದು, ಆ ಸೇವಕರನ್ನು ನೋಡಿ, '' ಎಂತ ಕೈಲಾಗದವರಪ್ಪ ನೀವು ? ನಮ್ಮ ಕುಮಾರಿಯರನ ಹುಡುಕಿ ಕಂಡುಹಿಡಿದು ಕರೆದುಕೊಂಡು ಬರುವುದನ ಬಿಟ್ಟು, ಹೀಗೆ ಸುಮ್ಮನೆ ಬಂದುದರ ಅರ್ಥವೇನು ಅವರನ್ನು ಹುಡುಕಲು ಹೋದ ಸಹೋದರರ ಗ ಏನಾಯಿತೋ ಪಾಪ ? ಆ ಎಳೆ ಮಕ್ಕಳು ಎಂತ ಆಪತ್ತಿನಲ್ಲಿ ಸಿಕ್ಕಿಬಿದ್ದಿದ್ದಾರೋ ? ಇಲ್ಲದಿದ್ದ ಈ ಕುದುರೆಗಳು ಅನಾಥವಾಗುತ್ತಿದ್ದುವೆ ? ಇಷ್ಟಾ ಮೇಲೆ ಇನ್ನೆಲ್ಲಿಯ ಆಸೆ ? ನನಗೂ ಜೀವನದಮೇ ಆಶೆಯಿಲ್ಲ. ಆದರೂ ನೀವು ನನ್ನ ನಂಬಿಕೆಯ ಸೇವಕರು. ಪುನಃ ಹೋಗಿರಿ. ಒಳ್ಳೆಯ ಸಮಾಚಾ ದೊಂದಿಗೆ ತಿರುಗಿ ಬನ್ನಿರಿ. ಅಷ್ಟರವರೆಗೆ ನಾ ಬದುಕಿರುತ್ತೇನೋ ಇಲ್ಲವೋ, ಅದೃಷ್ಟದ ಕೈಯಲ್ಲಿ ಹೋಗಿಬನ್ನಿ. ಸುಮ್ಮನೆ ನಿಲ್ಲಬೇಡಿ.'' ಎಂ ಬಡಬಡಿಸಿದನು. ಆ ಸೇವಕರು ಏನೂ ಹೇಳದೆ ಬ ವಂದಿಸಿ ಹೊರಟುಹೋದರು.

ಈ ಸೇವಕರು ಬರೀ ಕುದುರೆಗಳನ್ನು ತಂ ವಾರ್ತೆ ಆ ಕಿವಿಗೆ ಈ ಕಿವಿಗೆ ಬಿದ್ದು ಅಂತಃಪುರದ ಮೈಮರೆತಿದ್ದ ರಾಣಿಯ ಕಿವಿಗೂ ಮುಟ್ಟಿ, ಅವಳನ್ನು ಇನ್ನಷ್ಟು ಹದ ಗೆಡಿಸಿತು.

( ಇನ್ನೂ ಇದೆ





May 1975

# ವೀರಹನುಮಾನ್

ರಾವಣನ ಮಾತು ಕೇಳಿ ಲಕ್ಷ್ಮಣನು ತುಸು ಶಾಂತನಾಗಿ ಕಿಷ್ಕಿಂಧೆಗೆ ಹೊರಟನು. ಆಗ ಅವನು ತನ್ನ ಭುಜದ ಮೇಲೆ ಬಿಲ್ಲನ್ನು ತಗಲಿಸಿಕೊಂಡಿದ್ದನು. ಬಾಣ ತುಂಬಿದ ಬತ್ತಳಿಕೆಯೂ ಹೆಗಲಲ್ಲಿದ್ದಿತು. ಸುಗ್ರೀವನ ಬಳಿಗೆ ತಾನು ಹೋಗಿ ಏನು ಹೇಳಬೇಕು, ಅದಕ್ಕೆ ಸುಗ್ರೀವನು ಏನು ಉತ್ತರ ಕೊಡುತ್ತಾನೆ, ಆಗ ತಾನು ಯಾವ ರೀತಿಯಾಗಿ ಮಾತಾಡಬೇಕು ಎಂಬುದನ್ನೆಲ್ಲ ಆಲೋಚಿಸುತ್ತ ಬೇಗಬೇಗ ನಡೆಯುತ್ತಿದ್ದನು.

ಕಿಷ್ಕಿಂಧೆ ಸಮೀಪವಾದಂತೆ ದೂರದಿಂದ ಲಕ್ಷ್ಮಣನನ್ನು ನೋಡಿ ಅಲ್ಲಿಯ ವಾನರರು ಯಾವನೋ ಶತ್ರು ಮನುಷ್ಯನು ಬರುತ್ತಿದ್ದಾನೆಂದುಕೊಂಡು ಕಲ್ಲು ಬಂಡೆಗಳನ್ನೂ ಮರಗಳನ್ನೂ ಕೈಗೆತ್ತಿಕೊಂಡು ಯುದ್ಧ ಮಾಡಲು ಸಿದ್ಧರಾಗತೊಡಗಿದರು. ಅದನ್ನು ನೋಡಿ ಲಕ್ಷ್ಮಣನಿಗೆ ಇನ್ನಷ್ಟು ಕೋಪ ಏರತೊಡಗಿತು. ಅವನ ಕಣ್ಣು ಮುಖಭಾವಗಳಲ್ಲಿ ತಾಂಡವಿಸುವ ಕೋಪವನ್ನು ನೋಡಿ ಅವನ ಮೇಲೆ ಬೀಳಲು ಬಂದ ವಾನರರಿಗೆ ದಿಗಿಲಾಯಿತು. ಅವರು ತಮ್ಮ ಕೈಯಲ್ಲಿದ್ದುದನ್ನೆಲ್ಲ ಕೆಳಕ್ಕೆ ಚೆಲ್ಲಿ ಸುಗ್ರೀವನ ಬಳಿಗೆ ಓಡಿದರು. ಅಷ್ಟರಲ್ಲಿ ಕೆಲವರು ಲಕ್ಷ್ಮಣನ ಗುರುತು ಹಿಡಿದು ಇನ್ನಷ್ಟು ಹೆದರಿ ಸುಗ್ರೀವನ ಬಳಿಗೆ ಹೋಗಿ ಲಕ್ಷ್ಮಣನು ಕೋಪದಿಂದ ಬರುತ್ತಿರುವ ಸಂಗತಿಯನ್ನು ಅವಸರವಸರವಾಗಿ ಹೇಳಿದರು. ಆಗ ತಾರೆಯೊಂದಿಗೆ ಸರಸಾಲಾಪದಲ್ಲಿ ಮೈಮರೆತಿದ್ದ ಸುಗ್ರೀವನಿಗೆ ಅದಾವುದೂ ಕೇಳಿಸಲಿಲ್ಲ.

ಆದರೆ ಅಂಗದನು ಸಂಗತಿ ಅರ್ಥ ಮಾಡಿಕೊಂಡು ಹೆದರುತ್ತಾ ಲಕ್ಷ್ಮಣನ ಇದಿರಿಗೆ ಬಂದನು. ಅವನನ್ನು ನೋಡಿ ಲಕ್ಷ್ಮಣನು, "ಹುಡುಗಾ, ನಾನು ಬಂದಿರುವೆನೆಂದು ಸುಗ್ರೀವನಿಗೆ ತಿಳಿಸು. ರಾಮನು ಬಹಳ ದುಃಖದಲ್ಲಿರುವುದರಿಂದ, ನಾನು ಬಂದೆನೆಂದು ಹೇಳು." ಎಂದನು.

ಅಂಗದನು ಸುಗ್ರೀವನ ಬಳಿಗೆ ಓಡಿಹೋಗಿ, ಲಕ್ಷ್ಮಣನು ಮಾತಾಡಲು ಬಂದಿರುವನೆಂದೂ, ತುಂಬ ಕೋಪದಲ್ಲಿರುವನೆಂದೂ ಹೇಳಿದನು. ಅಂಗದನ ಮಾತಿನಿಂದ ಸುಗ್ರೀವನು ಜರ್ರನೆ ಅರಿವಿಗೆ ಬಂದವ

೭. ಸುಗ್ರೀವನ ಸಹಾಯ



ನಾಗಿ, "ಓಹೋ! ಲಕ್ಷ್ಮಣನು ಕೋಪದಿಂದ ಬಂದಿರುವನೇ? ನಾನು ಯಾವ ತಪ್ಪು ಮಾತುಗಳನ್ನೂ ಹೇಳಲಿಲ್ಲವಲ್ಲಾ? ತಪ್ಪು ಕೆಲಸ ಕೂಡ ನಾನು ಮಾಡಲಿಲ್ಲ. ಹಾಗಿರುವಾಗ ಲಕ್ಷ್ಮಣನಿಗೆ ನನ್ನ ಮೇಲೆ ಕೋಪವೇಕೆ ಬಂದಿರಬೇಕು? ನನ್ನ ಶತ್ರುಗಳಾರೋ ನನ್ನ ಮೇಲೆ ಅವನ ಹತ್ತಿರ ಏನೋ ಚಾಡಿ ಹೇಳಿರಬೇಕು. ಅದಕ್ಕಾಗಿ ನಾನು ಹೆದರುವೆನೆಂದು ಯಾರೂ ಭಾವಿಸಬೇಡಿ. ಸ್ನೇಹಿತರಾಗಿರುವವರಿಗೆ ನಿಷ್ಕಾರಣವಾಗಿ ಕೋಪ ಬಂದರೆ ಯಾರಿಗಾದರೂ ಸಂಕಟವಾಗುತ್ತದಷ್ಟೆ? ನನಗಿರುವ ಭಯವೇನೆಂದರೆ, ರಾಮನು ನನಗೆ ಮಾಡಿದ ಉಪಕಾರಕ್ಕೆ ತಕ್ಕುದಾದ ಪ್ರತ್ಯುಪಕಾರ ನಾನಿನ್ನೂ ಮಾಡಿಲ್ಲ. ಅದಕ್ಕಾಗಿ ರಾಮನ ಕೋಪಕ್ಕೆ ಹೆದರಬೇಕಾಗಿದೆ. ಅವನಿಗೆ ಕೋಪ ಬಾರದಿದ್ದರೆ ಲಕ್ಷ್ಮಣನಿಗೂ ಕೋಪ ಬರಲಿಕ್ಕಿಲ್ಲ" ಎಂದು ತನ್ನ ಸುತ್ತಲೂ ಇರುವವರೊಂದಿಗೆ ಹೇಳಿದನು.

ಆಗ ಬುದ್ಧಿವಂತನಾದ ಹನುಮಂತನು ಉಳಿ
ಮಂತ್ರಿಗಳ ಸಮಕ್ಷಮದಲ್ಲಿ ಸುಗ್ರೀವನೊಂದಿಗೆ
"ರಾಜಾ, ನೀನು ರಾಮನು ಮಾಡಿದ ಉಪಕಾರವನ್ನು
ಸ್ಮರಿಸಬೇಕಾದುದು ಸಹಜವೇ. ಸ್ವಲ್ಪ ಕಾಲ
ವೈಮರೆತು ಕಾಲಗತಿಯನ್ನು ಗಮನಿಸದೆ ಬಿಟ್ಟುದ
ಸ್ವಲ್ಪ ತಪ್ಪಾಯಿತು. ಶರದೃತುವು ಪ್ರವೇಶಿಸಿಬಿಟ್ಟಿದೆ
ಯುದ್ಧದ ಪ್ರಯತ್ನಗಳಿಗೆಲ್ಲ ಇದೇ ತಕ್ಕುದಾದ ಕಾಲ
ಅದನ್ನು ನೆನಪು ಮಾಡಲಿಕ್ಕಾಗಿಯೇ ಲಕ್ಷ್ಮಣನು
ಬಂದಿರುತ್ತಾನೆ. ಹೆಂಡತಿಯನ್ನು ಕಳೆದುಕೊಂಡ
ದುಃಖದಲ್ಲಿರುವ ರಾಮನು, ಲಕ್ಷ್ಮಣನ ಮೂಲ
ವಾಗಿ ಕಟುವಾಗಿ ನಿನ್ನನ್ನು ಮಾತಾಡಿಸಿದರೂ ನೀನು
ಸಹಿಸಿಕೊಳ್ಳಬೇಕು. ದುಡುಕುತನದಿಂದ ನೀನು
ಕೋಪಿಸಿ ಏನಾದರೂ ಹೇಳಿಬಿಡಬಾರದು. ಕರ್ತವ್ಯ
ವನ್ನು ಮರೆತು ಸುಮ್ಮನಿದ್ದ ತಪ್ಪೊಂದನ್ನು ಮಾಡಿರು
ವುದರಿಂದ, ಈಗ ಎಚ್ಚರಿಕೆ ಕೊಡಲು ಬಂದಿರು
ಲಕ್ಷ್ಮಣನನ್ನು ಒಳ್ಳೆಯ ರೀತಿಯಲ್ಲಿ ಸಮಾಧಾನಪಡಿ
ಸುಮುಖನನ್ನಾಗಿ ಮಾಡುವುದರ ಹೊರತು ಬೇ
ದಾರಿಯಿರುವಂತೆ ನನಗೆ ಕಾಣುವುದಿಲ್ಲ. ಮಂ
ಸ್ಥಾನದಲ್ಲಿ ನಿನ್ನ ಹಿತವನ್ನು ಬಯಸಿ ಈ ಮಾ
ಹೇಳುತ್ತಿದ್ದೇನೆ. ನೀನು ಈಗಲೇ ನಿನ್ನ ಮಗನನ್ನೂ
ಬಂಧುವರ್ಗದವರನ್ನೂ ಹಿಂದಿಟ್ಟುಕೊಂಡು ಲಕ್ಷ್ಮ
ಬಳಿಗೆ ಹೋಗಿ ಅವನು ಹೇಳಿದಂತೆ ನಡೆಯುವುದ
ಒಪ್ಪಿಕೋ." ಎಂದನು.

ಕೂಡಲೇ ಸುಗ್ರೀವನು ಲಕ್ಷ್ಮಣನನ್ನು ಒ
ಕರೆದುಕೊಂಡು ಬರಲು ಅಂಗದನನ್ನು ಕಳುಹಿಸಿದ
ಅದರಂತೆ ಅಂಗದನು ಲಕ್ಷ್ಮಣನನ್ನು ಕರೆದುಕೊಂ
ಬರುವಾಗ, ಲಕ್ಷ್ಮಣನು ಕಿಷ್ಕಿಂಧೆಯಲ್ಲಿರುವ ವಾ
ಪ್ರಮುಖರ ಮನೆಗಳನ್ನು ನೋಡುತ್ತ ಸುಗ್ರೀ
ಗೃಹವನ್ನು ಪ್ರವೇಶ ಮಾಡಿದನು. ಆ ಮನೆ ಇ
ಭವನದಂತೆ ಕಂಡುಬಂದಿತು. ಸುಗ್ರೀವನ ಅಂತ
ದಿಂದ ವೀಣೆಯ ನಾದವು ಕೇಳಿಬರುತ್ತಿದ್ದಿತು. ಅ



ಸುಂದರಿಯರಾದ ಸ್ತ್ರೀಯರು ಅನೇಕರು ಅಲ್ಲಲ್ಲಿ ಕಂಡುಬಂದರು. ಅದನ್ನೆಲ್ಲ ನೋಡುವಾಗ ಸುಗ್ರೀವನು ದೊಡ್ಡ ಭೋಗಪುರುಷನಂತೆ ಕಾಲ ಕಳೆಯುತ್ತಿದ್ದ ನೆಂಬುದು ಸ್ಪಷ್ಟವಾಗುತ್ತಿದ್ದಿತು. ರಾಮನ ದುಃಖ ವನ್ನೂ ಸುಗ್ರೀವನ ಸುಖವನ್ನೂ ನೆನೆಯುತ್ತ ಲಕ್ಷ್ಮಣನಿಗೆ ಕೋಪವು ಉಕ್ಕುತ್ತಿರಲು ಬಿಲ್ಲಿನ ನಾರನ್ನೆಳೆದು ದೊಡ್ಡ ಧ್ವನಿಯನ್ನೆಬ್ಬಿಸಿದನು. ಆ ಶಬ್ದವು ಮಂದಿರದ ಕೋಣೆಗಳಲ್ಲೆಲ್ಲಾ ಪ್ರತಿಧ್ವನಿ ಕೊಟ್ಟು ಎಲ್ಲರನ್ನೂ ನಡುಗಿಸಿತು.

ಲಕ್ಷ್ಮಣನ ಬಿಲ್ಲಿನ ಧ್ವನಿಯನ್ನು ಕೇಳಿದ ಕೂಡಲೇ ಅವನು ಸಮೀಪಿಸಿಬಿಟ್ಟನೆಂದು ಸುಗ್ರೀವನ ಎದೆ ಡಡಡಡ ಹೊಡೆದುಕೊಳ್ಳತೊಡಗಿತು. ತನ್ನ ನಾಲಗೆ ಒಣಗಿಹೋಗುವುದನ್ನರಿತು ಅವನು ತಾರೆಯೊಂದಿಗೆ, "ತಾರಾ, ಈ ಲಕ್ಷ್ಮಣನು ಬಹಳ ಶಾಂತ ಸ್ವಭಾವ ದವನೆಂದು ಮಾಡಿದ್ದೆ. ಈ ಶಬ್ದ ಕೇಳಿದರೆ ಅವನಿಗೆ ಬಹಳ ಕೋಪ ಬಂದಿರುವ ಹಾಗೆ ಕಾಣುತ್ತದೆ. ಅಷ್ಟು ಕೋಪ ಬರಲು ಕಾರಣವೇನೋ? ನಾನು ಮ ಬಾರದಂತಹ ತಪ್ಪು ಏನಾದರೂ ಮಾಡಿದ್ದೇನೆಯೆ ಯಾವುದಕ್ಕೂ ಒಳ್ಳೆಯದು, ಮೊದಲು ನೀನು ಅ ಬಳಿಗೆ ಹೋಗಿ ಮಾತಾಡಿಸಿ ಅವನನ್ನು ಪ್ರಸ ಗೊಳಿಸು. ಆಮೇಲೆ ನಾನು ಬರುತ್ತೇನೆ" ಎಂದ

ಜಾಣೆಯಾದ ತಾರೆ ಕೂಡಲೇ ಲಕ್ಷ್ಮಣನ ಬ ಬಂದಳು. ಅವಳ ಕಣ್ಣು ಮುಖಭಾವಗಳಲ್ಲಿ ಇ ಸುರೆಯು ಮತ್ತು ತೇಲಾಡುತ್ತಿದ್ದಿತು. ಅಂತೆ ಆಗತಾನೇ ಮಂಚದಿಂದೆದ್ದು ಬಂದವಳಂತೆ, ಅಸ್ತವ್ಯ ವಾದ ಉಡುಗೆ ಆಭರಣಗಳೊಂದಿಗೆ ನಿಂತ ತಾ ಯನ್ನು ನೋಡಿ ಲಕ್ಷ್ಮಣನು ತಲೆತಗ್ಗಿಸಿಕೊಂಡ

ತಾರೆ ಅವನೊಂದಿಗೆ, "ಲಕ್ಷ್ಮಣಾ, ನಿನಗೆ ಇ ಸಿಟ್ಟು ಬರುವ ಹಾಗೆ ಯಾರು ಮಾಡಿದರು ಅಷ್ಟೊಂದು ಸಾಹಸ ಯಾರಿಗೆತಾನೇ ಬಂದಿತು? ಎಂದು ಕೇಳಿದಳು.

"ನೀನು ಗಂಡನ ಹಿತವನ್ನು ಬಯಸುವವಳಾ ಅದು ನಿನಗೆ ತಿಳಿಯದೇ? ನಿನ್ನ ಗಂಡ ಯಾವಾಗಲ ಮದ್ಯಪಾನ ಮಾಡುತ್ತ, ಸ್ತ್ರೀಯರ ನಡುವೆ ಹ ಚಕ್ಕಂದವಾಡುತ್ತ ಧರ್ಮಾರ್ಥಗಳನ್ನು ಸಂಪೂ ಮರೆತುಹೋದ. ಉಪಕಾರಕ್ಕೆ ಪ್ರತ್ಯುಪ ಮಾಡದೆ ಬಿಡುವುದೆಂದರೆ, ಧರ್ಮಕ್ಕೂ ಅರ್ಥ ಹಾನಿ ಮಾಡಿದ ಹಾಗೆಯೇ ಆಯಿತು. ನಮ್ಮ ಹೀಗೆ ಉಪೇಕ್ಷೆ ಮಾಡಿ ಸುಮ್ಮನಿದ್ದರೆ ನಾವ ಮಾಡಬೇಕೆಂಬುದನ್ನು ನೀನೇ ಹೇಳು" ಎ ಲಕ್ಷ್ಮಣನು ತಾರೆಯೊಂದಿಗೆ ಹೇಳಿದನು.

ಅದಕ್ಕೆ ತಾರೆ, "ಲಕ್ಷ್ಮಣಾ, ನಿನ್ನ ಮಾ ನಿಜವೇ. ಅದರಲ್ಲಿ ಸ್ವಲ್ಪವೂ ತಪ್ಪಿಲ್ಲ. ಆದರೆ ಸಾಕ್ಷಿಯಾಗಿ ಸ್ನೇಹಿತನಾದವನು ಸ್ವಲ್ಪ ಮಾತ್ರ ಗತಿಯನ್ನು ತಪ್ಪಿದುದಕ್ಕೆ ಇಷ್ಟೊಂದು ಕ ಮಾಡಬಹುದೆ? ಸುಗ್ರೀವನು ನಿಮ್ಮ ಕೆ ಗುರಿಯಲ್ಲೇ ಇದ್ದಾನೆ. ಸ್ವಲ್ಪ ತಡಮಾಡಿದ್ದು

ಅದಕ್ಕಾಗಿ ನಿನ್ನಂತಹ ಮಹಾಪುರುಷನು ಅಲ್ಪನ ಮೇಲೆ ಆಗ್ರಹ ತೋರಬಾರದು. ಅವನು ನಿಮ್ಮ ಕೆಲಸವನ್ನು ಸ್ವಲ್ಪ ಉದಾಸೀನ ಮಾಡಲು, ನಾನು ಅವನ ಬಳಿಯಲ್ಲಿದ್ದುದೇ ಕಾರಣವಾಗಿದೆ. ನೀನು ಸುಗ್ರೀವನನ್ನು ಕ್ಷಮಿಸಿ ಶಾಂತನಾಗಬೇಕು. ಎಂತೆಂತಹ ಮಹಾಪುರುಷರೇ ಹೆಣ್ಣಿನ ಮೋಹದಲ್ಲಿ ಮೈಮರೆತು ಹೋಗಿರುವಾಗ ಈ ಸುಗ್ರೀವನೆಷ್ಟು ಮಾತ್ರದವನು? ನೀನು ದಯವಿಟ್ಟು ಸುಮುಖನಾಗಿ ಒಳಕ್ಕೆ ಬರಬೇಕು." ಎಂದಳು.

ಅವಳು ಮುಂದೆ ಹೋಗಲು ಲಕ್ಷ್ಮಣನು ಅವಳ ಹಿಂದೆ ಹೋದನು. ಸುಗ್ರೀವನು ಮಹಾವೈಭವದಿಂದ ಝಗಝಗಿಸುವ ಆಭರಣಗಳನ್ನೂ, ಪುಷ್ಪಮಾಲಿಕೆಗಳನ್ನೂ ಧರಿಸಿಕೊಂಡು ಸಿಂಹಾಸನದ ಮೇಲೆ ಕುಳಿತಿದ್ದ. ಅವನ ಸುತ್ತಲೂ ಅನೇಕ ಮಂದಿ ಅಪ್ಸರಸಿಯಂತಹ ಸ್ತ್ರೀಯರಿದ್ದರು. ಸುಗ್ರೀವನು ತನ್ನ ಪತ್ನಿ ರುಮೆಯನ್ನು ಆಲಿಂಗಿಸಿಕೊಂಡಿದ್ದವನು ಲಕ್ಷ್ಮಣನನ್ನು ನೋಡಿ ಧಿಗ್ಗನೆದ್ದನು. ಅವನ ವೈಭವವನ್ನು ನೋಡಿ ಲಕ್ಷ್ಮಣನು ಕಾಲರುದ್ರನಂತಾದನು.

ಸುಗ್ರೀವನು ಸಿಂಹಾಸನದಿಂದೆದ್ದು ದಡದಡನೆ ಕೆಳಗಿಳಿದು ನಿಂತನು. ಅವನೊಂದಿಗೆ ಎಲ್ಲ ಸ್ತ್ರೀಯರೂ ಎದ್ದು ನಿಂತರು. ತನಗೆ ನಮಸ್ಕಾರ ಮಾಡುತ್ತ ನಿಂತ ಸುಗ್ರೀವನೊಂದಿಗೆ, ಲಕ್ಷ್ಮಣನು ಹೀಗೆಂದನು :

"ಸುಗ್ರೀವಾ, ನಿನಗೆ ರಾಮನ ಮಾತಿನಂತೆ ಎಚ್ಚರಿಸಲು ಬಂದಿದ್ದೇನೆ. ಹೇಳುವ ಮಾತುಗಳನ್ನು ಕೇಳು. ರಾಮನಿಂದ ನಿನ್ನ ಕೆಲಸವು ತೀರಿಹೋದ ಮೇಲೆ, ನೀನು ರಾಮನ ಕಾರ್ಯವನ್ನು ನೋಡಬೇಕೋ ಬೇಡವೋ? ಕೃತಘ್ನನಾಗುವೆಯಾ? ಅಸತ್ಯ ...ನಿಸುವೆಯಾ? ಸೀತೆಯನ್ನು ಹುಡುಕಿಸಲು ...ನ್ನು ಏನೂ ಮಾಡಲಿಲ್ಲವೇಕೆ? ಹೀಗೆ ಕುಡಿದು ಮೈಮರೆತು ಬಿದ್ದುಕೊಂಡಿರುವುದರ ಅರ್ಥವೇನು? ...ಇಂಥವನೆಂದು ತಿಳಿದಿದ್ದರೆ ರಾಮನು ನಿನ್ನನ್ನು



ವಾನರ ರಾಜನನ್ನಾಗಿ ಮಾಡುತ್ತಿದ್ದನೆ? ಈಗಲೂ ನಿನ್ನನ್ನು ಒಂದೇ ಬಾಣದಿಂದ ವಾಲಿಯ ಬಳಿಗೆ ಕಳುಹಿಸಲು ರಾಮನೇ ಬರಬೇಕಾಗಿಲ್ಲ."

ತಾರೆ ಮತ್ತೆ ಸುಗ್ರೀವನಿಗೆ ಅಡ್ಡ ನಿಂತು ಲಕ್ಷ್ಮಣನೊಂದಿಗೆ, "ಲಕ್ಷ್ಮಣಾ, ಸುಗ್ರೀವನು ನೀನು ಹೇಳುವಂತೆ ಕೃತಘ್ನನೂ ದ್ರೋಹಿಯೂ ದುಷ್ಟನೂ ಅಲ್ಲ. ಎಷ್ಟೋ ವರ್ಷಗಳವರೆಗೆ ಕಷ್ಟಗಳನ್ನು ಅನುಭವಿಸಿ ಅನುಭವಿಸಿ, ಕಡೆಗೆ ಈಗತಾನೇ ಸುಖಲಾಲಸನಾಗಿದ್ದಾನೆ. ಮಿತ್ರನ ಈ ತಪ್ಪನ್ನು ನೀನು ಕ್ಷಮಿಸಬಹುದು. ರಾಮನಿಂದಲೇ, ರಾಮನ ಅನುಮತಿ ಪಡೆದೇ ಹೀಗೆ ಸುಖದಲ್ಲಿ ಬಿದ್ದಿದ್ದಾನೆ. ಈಗ ಎಚ್ಚೆತ್ತ ಸುಗ್ರೀವನು ರಾಮನಿಗಾಗಿ ನನ್ನನ್ನೂ ರುಮೆಯನ್ನೂ ತನ್ನ ಸಮಸ್ತವನ್ನೂ ಬಿಟ್ಟುಬಿಡಲು ಸಿದ್ಧನೇ. ಸಂದೇಹಿಸಬೇಡ. ಸೀತೆಯನ್ನು ಹುಡುಕಿಸಿ ರಾಮನ ಕಾರ್ಯವನ್ನು ಸಾಧಿಸುತ್ತಾನೆ. ಅದಕ್ಕಾಗಿ ರಾವಣನೊಂದಿಗೆ ತಾನೇ ಯುದ್ಧ ಮಾಡುತ್ತಾನೆ. ಹಾಗೆ



7



ನೋಡಿದರೆ ಈಗಾಗಲೇ ಅವನು ರಾಮಕಾರ್ಯಕ್ಕಾಗಿ ವಾನರರಿಗೆಲ್ಲಾ ಸಮಾಚಾರ ಕಳುಹಿಸಿದ್ದಾನೆ. ಅವರೆಲ್ಲ ಬಂದು ಸೇರಬೇಕಾಗಿದೆ. ಅದಕ್ಕಾಗಿ ಸುಗ್ರೀವನಿಟ್ಟ ದಿನವೂ ಇದೇ ದಿನ. ಸುತ್ತುಮುತ್ತಲಿರುವವರೆಲ್ಲರೂ ಇವತ್ತೇ ಬರಬೇಕೆಂದು ಆಜ್ಞೆಯಾಗಿದೆ. ನೀನು ಕೋಪವನ್ನು ಬಿಟ್ಟು ಪ್ರಸನ್ನನಾಗು" ಎಂದಳು.

ತಾರೆಯ ಮಾತುಗಳಿಂದ ಲಕ್ಷ್ಮಣನು ಮೆತ್ತಗಾದನು. ಅವನ ಮುಖದಲ್ಲಿ ಎದ್ದ ಶಾಂತಿಯ ಕಳೆಯನ್ನು ನೋಡಿ, ಸುಗ್ರೀವನ ಮನಸ್ಸು ಸ್ಥಿಮಿತಕ್ಕೆ ಬಂದಿತು. ಆಗ ಅವನು ಮುಂದೆ ಬಂದು ಲಕ್ಷ್ಮಣನೊಂದಿಗೆ, "ಲಕ್ಷ್ಮಣಾ, ನನ್ನಿಂದ ಸ್ವಲ್ಪ ಆಲಸ್ಯವಾಗಿರುವುದಾದರೆ ಕ್ಷಮಿಸು. ಲೋಕದಲ್ಲಿ ತಪ್ಪು ಮಾಡದವರಾರಿದ್ದಾರೆ? ಹಾಗೆ ನನ್ನ ತಪ್ಪನ್ನೂ ಮರೆತುಬಿಡು" ಎಂದನು.

ಲಕ್ಷ್ಮಣನ ಕೋಪ ಸಂಪೂರ್ಣ ಇಳಿದುಹೋಯಿತು. ಅವನು ಸುಗ್ರೀವನನ್ನು ಮೆಚ್ಚಿಕೊಳ್ಳುತ್ತ, "ಸುಗ್ರೀವಾ, ರಾವಣನೊಂದಿಗೆ ಯುದ್ಧ ಮಾಡಲು ನಿನ್ನ ಸಹಾಯವೊಂದಿದ್ದುಬಿಟ್ಟರೆ ಅದಕ್ಕಿಂತ ಹೆಚ್ಚಿನ ಪ್ರತ್ಯುಪಕಾರವೇನು ಬೇಕು? ನೀನು ಈಗಲೇ ನನ್ನೊಂದಿಗೆ ಬಂದು, ಸೀತೆಯನ್ನು ನೆನೆದು ದುಃಖಿಸುತ್ತಿರುವ ರಾಮನನ್ನು ಸಮಾಧಾನಪಡಿಸು." ಎಂದನು.

ಸುಗ್ರೀವನು ತನ್ನ ಪಕ್ಕದಲ್ಲಿದ್ದ ಹನುಮಂತನೊಂದಿಗೆ ಹೀಗೆಂದನು: "ಹನುಮಂತಾ, ಪ್ರಪಂಚದಲ್ಲಿರುವ ಎಲ್ಲಾ ವಾನರರನ್ನೂ ಕರೆಯಲು ದೂತರನ್ನು ಕಳುಹಿಸು. ನಾನು ಈಮೊದಲು ಕಳುಹಿಸಿದ ದೂತರು ಬೇಗನೇ ಬರುವಂತೆ ಅವಸರಪಡಿಸು. ನಡೆಯಲು ಉದಾಸೀನ ಮಾಡುವ ಸೋಮಾರಿಗಳನ್ನು ನನ್ನ ಬಳಿಗೆ ಪ್ರತ್ಯೇಕವಾಗಿ ಎಳೆದು ತರಲಿ. ಇಂದಿನಿಂದ ಹತ್ತು ದಿನಗಳೊಳಗೆ ಇಲ್ಲಿಗೆ ಬಂದು ಸೇರದಿರುವ ವಾನರರಿಗೆ ಮರಣ ದಂಡನೆ ಕೊಡುವೆನೆಂದು ಪ್ರಕಟಪಡಿಸು. ಇದು ನಿಜ" ಎಂದನು. ಕೂಡಲೇ ಹನುಮಂತನು ಸುಗ್ರೀವನ ಆಜ್ಞೆಯನ್ನು ಕಿಷ್ಕಿಂಧೆಯಲ್ಲಿರುವ ವಾನರರ ಮೂಲಕವಾಗಿ ಎಂಟು ದಿಕ್ಕುಗಳಿಗೂ ಕಳುಹಿಸಿದನು.

ಆಮೇಲೆ ಸುಗ್ರೀವನು ಒಂದು ಚಿನ್ನದ ಪಲ್ಲಕಿಯನ್ನು ತರಿಸಿ, ಅದರಲ್ಲಿ ತನ್ನೊಂದಿಗೆ ಲಕ್ಷ್ಮಣನನ್ನೂ ಕೂಡಿಸಿಕೊಂಡು ರಾಮನ ಬಳಿಗೆ ಹೊರಟನು. ಅವನ ಹಿಂದೆ ಅವನ ಪರಿವಾರವೂ ನಡೆಯಿತು. ಹೀಗೆ ಮಹಾವೈಭವದಿಂದ ರಾಮನ ಬಳಿಗೆ ಹೊರಟ ಸುಗ್ರೀವನು, ರಾಮನು ಅಷ್ಟು ದೂರದಲ್ಲಿರುವಾಗಲೇ ಪಲ್ಲಕಿಯಿಂದಿಳಿದನು. ಕೈಮುಗಿದುಕೊಂಡೇ ರಾಮನ ಬಳಿಗೆ ಹೋಗಿ, ಅವನ ಕಾಲಿನ ಬುಡದಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಕೂಡಲೇ ರಾಮನು ತನ್ನ ಕಾಲಿಗೆ ಬಿದ್ದ ಸುಗ್ರೀವನನ್ನು ಪ್ರೇಮದಿಂದ ಎಬ್ಬಿಸಿ ಗಾಢಾಲಿಂಗನ ಮಾಡಿಕೊಂಡು, ತನ್ನ ಬಳಿಯಲ್ಲಿ ಕೂಡಿಸಿ ತಾನೂ ಕುಳಿತನು. ಎಲ್ಲರೂ ರಾಮನಿಗೆ ಕೈಮುಗಿದು ಕುಳಿತುಕೊಂಡರು.

ರಾಮನು ಸುಗ್ರೀವನೊಂದಿಗೆ ಕುಶಲ ವಿಚಾರಿಸಿ ಯುದ್ಧಕಾಲವು ಸಮೀಪಿಸಿತೆಂಬುದನ್ನು ಜ್ಞಾಪಕ ಪಡಿಸಿದನು. ಆಗ ಸುಗ್ರೀವನು, "ರಾಮಾ, ವೀರಾಧಿವೀರರಾದ ವಾನರರು ಕೋಟಿ ಸಂಖ್ಯೆಯಲ್ಲಿ ನಿನಗೆ ಸಹಾಯ ಮಾಡಲು ಬರುತ್ತಿದ್ದಾರೆ. ಅವರೆಲ್ಲ ಕೂಡಿ ರಾವಣನನ್ನು ಕುಟುಂಬ ಸಹಿತವಾಗಿ ಕೊಂದು ಸೀತೆಯನ್ನು ಹುಡುಕಿ ನಿನಗೆ ತಂದು ಕೊಡುತ್ತಾರೆ." ಎಂದು ತಾನು ಅದುವರೆಗೆ ಮಾಡಿದ ಕೆಲಸಗಳನ್ನು ಅರಿಕೆ ಮಾಡಿದನು. ಅದನ್ನು ಕೇಳಿ ರಾಮನು ಸಂತೋಷದಿಂದ, "ಸುಗ್ರೀವಾ, ನಿನ್ನ ಸಹಾಯದಿಂದ ನಾನು ಶತ್ರುವನ್ನು ಕೊಲ್ಲಬಲ್ಲೆ" ಎಂದನು.

ಆ ಸಮಯದಲ್ಲಿ ಆಕಾಶದಲ್ಲಿ ಬಹಳ ಎತ್ತರದವರೆಗೆ ಧೂಳಿ ಏಳುತ್ತಿರುವುದನ್ನು ನೋಡಿದರು. ಅದು ಗುಂಪುಗುಂಪಾಗಿ ವಾನರರ ಸಮೂಹವು ಅಲ್ಲಿಗೆ ಬರುವಾಗ ಅವರ ಪಾದಾಘಾತದಿಂದ ಏಳುವ ಧೂಳು. ಎಲ್ಲೆಲ್ಲಿಯ ನದೀತೀರಗಳಿಂದ, ಸಮುದ್ರತೀರಗಳಿಂದ, ಬೆಟ್ಟಗಳ ತಪ್ಪಲಿಂದ ಹೊರಟು ಹೊರಟು ಬರುವ ವಾನರರು ಕೋಟಿ ಸಂಖ್ಯೆಯಲ್ಲಿ ತುಂಬಿದ್ದರು. ಅವರಲ್ಲಿ ಕೆಂಪಗಿನ ವಾನರರು, ಬೆಳ್ಳಗಿನ ವಾನರರು, ಕರ್ರಗಿನ ವಾನರರು, ಬೂದು ಬಣ್ಣದಲ್ಲಿರುವವರು ಗುಂಪುಗುಂಪಾಗಿ ಶತವಲಿ ಎಂಬ ವಾನರಶ್ರೇಷ್ಠನ ಹಿಂದೆ ಬಂದರು. ಬಂಗಾರದ ಬಣ್ಣದಿಂದ ಹೊಳೆಯುವ ತಾರೆಯ ತಂದೆಯಾದ ಮಹಾವೀರ ಸುಷೇಣನು ಕೆಲವು ಕೋಟಿ ವಾನರರೊಂದಿಗೆ ಬಂದನು. ಹಾಗೆಯೇ ಭಾರೀ ಗುಂಪಿನೊಂದಿಗೆ ರುಮೆಯ ತಂದೆ ತಾರನೂ ಬಂದನು. ಇಪ್ಪತ್ತೆರಡು ಸಾವಿರ ವಾನರರೊಂದಿಗೆ ಹನುಮಂತನ ತಂದೆ ಕೇಸರಿ ಬಂದನು. ಗವಾಕ್ಷ, ಧೂಮ್ರ ಎಂಬ ವಾನರರು ವಾನರ ಭಲ್ಲೂಕ ಸೇನೆಯೊಂದಿಗೆ ಬಂದರು. ಮೈಂದ, ದ್ವಿವಿಧ, ದರೀಮುಖ, ಗಜ ಎಂಬವರು ಅಸಂಖ್ಯಾಕ ವಾನರರೊಂದಿಗೆ ಬಂದರು. ಕಪ್ಪು ಬಣ್ಣದ ದೊಡ್ಡ ವಾನರ



ಸೇನೆಯೊಂದಿಗೆ ನೀಲನೂ, ಕೆಲವು ಕೋಟಿ ವಾನರರೊಂದಿಗೆ ಗವಯನೂ ಬಂದು ಸೇರಿದರು. ಜಾಂಬವಂತನು ಹತ್ತು ಕೋಟಿ ಭಲ್ಲೂಕ ಯೋಧರನ್ನು ತೆಗೆದುಕೊಂಡು ಬಂದನು. ಗಂಧಮಾದನನೂ, ಅಂಗದನೂ ಸಹ ದೊಡ್ಡದೊಡ್ಡ ವಾನರರ ಗುಂಪನ್ನು ಕರೆದುಕೊಂಡು ಬಂದರು. ಒಟ್ಟಿನಮೇಲೆ ಪ್ರಪಂಚದಲ್ಲಿರುವ ವಾನರ ಯೋಧರೆಲ್ಲರೂ ಕಿಷ್ಕಿಂಧೆಯನ್ನು ತಲಪಿದರು. ಅವರೆಲ್ಲರ ಕೋಲಾಹಲ ಧ್ವನಿಯಿಂದ ಆಕಾಶವು ತುಂಬಿತು.

ವಾನರ ಮುಖ್ಯರೆಲ್ಲರೂ ಸುಗ್ರೀವನ ಸುತ್ತಲೂ ನಿಂತು ನಮಸ್ಕಾರ ಮಾಡಿದರು. ಸುಗ್ರೀವನು ಅವರನ್ನೆಲ್ಲ ರಾಮನಿಗೆ ಸಮರ್ಪಿಸಿ, ಅವರನ್ನು ಕುರಿತು, "ನೀವು ನಿಮ್ಮ ನಿಮ್ಮ ಸೇನೆಯನ್ನು ನದಿಗಳ ಬದಿಯಲ್ಲಿಯೂ, ವನಗಳಲ್ಲಿಯೂ ಬೀಡುಬಿಡಿಸಿ. ಅವರೆಲ್ಲರನ್ನು ನೋಡಿಕೊಂಡಿರಿ" ಎಂದನು. ಆಮೇಲೆ ಅವನು ರಾಮನ ಕಡೆಗೆ ತಿರುಗಿ, "ರಾಮಾ.

ನಿನ್ನ ಅಪ್ಪಣೆಯಂತೆ ನಡೆಯಲು ವಾನರರು ಕೋಟಿ ಸಂಖ್ಯೆಯಲ್ಲಿ ಬಂದಿದ್ದಾರೆ. ಇವರಲ್ಲಿ ಕಾಮರೂಪಿಗಳಿದ್ದಾರೆ. ಪರ್ವತಾಕಾರರಿದ್ದಾರೆ. ಕಾಮಗಮನ ಶಕ್ತಿಯುಳ್ಳವರಿದ್ದಾರೆ. ಭಯಂಕರ ಪರಾಕ್ರಮಶಾಲಿಗಳಿದ್ದಾರೆ. ಅವರನ್ನೆಲ್ಲ ನೀನು ಇಷ್ಟಬಂದಹಾಗೆ ಉಪಯೋಗಿಸಬಹುದು. ನಿನ್ನ ಆಜ್ಞೆಯನ್ನು ಜವದಾಟದಂತೆ ಪಾಲಿಸುತ್ತಾರೆ. ಇವರೆಲ್ಲ ಏನು ಮಾಡಬೇಕೆಂದು ನನಗೂ ಗೊತ್ತಿದೆ. ಆದರೂ ಅವರಿಗೆ ನೀನೇ ಆಜ್ಞೆ ಮಾಡು. ನನಗೂ ಆಜ್ಞೆ ಮಾಡು. ನಾವೆಲ್ಲ ನಿನ್ನ ಆಜ್ಞಾಧೀನರು." ಎಂದನು.

ರಾಮನು ಸಂತೋಷದಿಂದ ಸುಗ್ರೀವನನ್ನು ಆಲಿಂಗಿಸಿಕೊಂಡು, "ಸುಗ್ರೀವಾ, ನನ್ನ ಸೀತೆ ಇನ್ನೂ ಬದುಕಿರಬಹುದೆ? ಇದ್ದರೆ ಎಲ್ಲಿ ಇದ್ದಾಳೆ? ಈ ಸಂಗತಿ ಮೊದಲು ಗೊತ್ತಾಗಬೇಕು. ಸೀತೆ ಒಂದು ಕಡೆಯಲ್ಲಿ ಬದುಕಿರುವುದು ನಿಜವೆಂದು ತಿಳಿದುಬಿಟ್ಟರೆ, ಆಮೇಲೆ ಏನು ಮಾಡಬೇಕೆಂಬುದನ್ನು ನಾವಿಬ್ಬರೂ ಕೂಡಿ ಆಲೋಚಿಸಬಹುದು. ಆದುದರಿಂದ ನನ್ನ ಇಚ್ಛೆಗೆ ತಕ್ಕಹಾಗೆ ನೀನೇ ವಾನರ ಪ್ರಮುಖರಾದವರಿಗೆ ಆಜ್ಞೆ ಮಾಡು" ಎಂದನು.

ಸುಗ್ರೀವನು ಪರ್ವತಾಕಾರದ ವಿನತನೆಂಬವನನ್ನು ಕರೆದು ಒಂದು ಲಕ್ಷ ವಾನರರನ್ನು ಕರೆದುಕೊಂಡು ಪೂರ್ವ ದಿಕ್ಕಿಗೆ ಹೋಗಿ ಸೀತೆಯನ್ನು ಹುಡುಕಬೇಕೆಂದು ಹೇಳಿದನು. ಅಲ್ಲಿ ರಾವಣನ ಗಮನಕ್ಕೆ ಸಾಧ್ಯವಾದ ಎಲ್ಲಾ ಪ್ರದೇಶಗಳನ್ನೂ ಶೋಧಿಸಬೇಕೆಂದು ಎಚ್ಚರಿಕೆ ಕೊಟ್ಟನು. ಶೋಧನೆ ಮುಗಿಸಿ ಒಂದು ತಿಂಗಳಿನೊಳಗೆ ಹಿಂದಿರುಗಿ ಬಂದುಬಿಡಬೇಕೆಂದೂ ಒತ್ತಿ ಹೇಳಿದನು.

ಆಮೇಲೆ ಸುಗ್ರೀವನು ಹೀಗೆಯೇ ಆಜ್ಞೆ ಮಾಡಿ ಕೆಲವು ವಾನರರನ್ನು ದಕ್ಷಿಣ ದಿಕ್ಕಿಗೆ ಕಳುಹಿಸಿದನು. ದಕ್ಷಿಣ ದಿಕ್ಕಿಗೆ ಹೋಗುವ ವಾನರರಲ್ಲಿ ನೀಲ, ಹನುಮಂತ, ಜಾಂಬವಂತ, ಸುಹೋತ್ರ, ಶರಾರಿ, ಶರಗುಲ್ಮ, ಗಜ, ಗವಾಕ್ಷ, ಗವಯ, ಋಷಭ, ಮೈಂದ, ದ್ವಿವಿಧ, ವಿಜಯ, ಗಂಧಮಾದನ, ಉಲ್ಕಾಮುಖ, ಅನಂಗ, ಅಂಗದ ಮೊದಲಾದ ವಾನರ ಶ್ರೇಷ್ಠರಿದ್ದರು. ಅವರ ಹಿಂದೆ ಭಾರಿ ಸೈನ್ಯವೂ ಇದ್ದಿತು. ರಾವಣನ ರಾಜ್ಯವು ದಕ್ಷಿಣ ದಿಕ್ಕಿನಲ್ಲಿರುವುದರಿಂದ ಆ ದಿಕ್ಕಿಗೆ ಸುಗ್ರೀವನು ವಿಶೇಷ ಗಮನ ಕೊಟ್ಟಿದ್ದನು. ತರುವಾಯ ಸುಗ್ರೀವನು ತಾರೆಯ ತಂದೆಯಾದ ಸುಷೇಣನನ್ನು ಅನೇಕ ಮಂದಿ ವಾನರ ವೀರರೊಂದಿಗೆ, ಪಶ್ಚಿಮ ದಿಕ್ಕಿಗೂ, ಶತವಲಿಯನ್ನು ಲಕ್ಷಮಂದಿ ವಾನರ ವೀರರೊಂದಿಗೆ ಉತ್ತರ ದಿಕ್ಕಿಗೂ ಕಳುಹಿಸಿಕೊಟ್ಟನು. ಈ ಬಗೆಯ ತ್ವರಿತ ಕಾರ್ಯಗಳನ್ನು ನೋಡಿ ರಾಮನಿಗೆ ಬಹಳ ಸಮಾಧಾನವಾಯಿತು.

(ಇನ್ನೂ ಇದೆ)

